# ಆಷಾಢದ ಒಂದು ದಿನ

ಹಿಂದಿ ಮೂಲ : ಮೋಹನ್ ರಾಕೇಶ್
ಅನುವಾದ : ಡಾ. ವಿಜಯಾಸುಬ್ಬರಾಜ್

# ಆಷಾಢದ ಒಂದು ದಿನ

ಹಿಂದಿ ಮೂಲ

**ಮೋಹನ್ ರಾಕೇಶ್**

ಅನುವಾದ

**ಡಾ. ವಿಜಯಾಸುಬ್ಬರಾಜ್**

ಸಿವಿಜಿ ಪಬ್ಲಿಕೇಷನ್ಸ್
ಬೆಂಗಳೂರು

ASHADADA ONDU DINA

A play Translated by
**Dr. Vijaya Subbaraj**
No. 51, Hamsi, Ist 'A' Cross
35th Main
Banagiri nagara
Banashankari 3rd Stage
Bangalore - 560 085
Mobile : 99869 28876

Published by
**CVG Publications**
No.70, 2nd Main Road,
Vyalikaval
Bangalore - 560 003



First Impression : 2014
Price : **Rs. 70/-**
Pages : xiv + 82 = 96
1/8th Demmy
80 GSM Maplitho

Printed by
**Sairam Printers**
Rajajinagar 6th Block
Bangalore - 560 010

# ಮೋಹನ್ ರಾಕೇಶ್
## ಒಂದು ಸಂಕ್ಷಿಪ್ತ ಪರಿಚಯ

ಐವತ್ತರ ದಶಕದ ಹಿಂದಿ ಸಾಹಿತ್ಯ ಸಂದರ್ಭದಲ್ಲಿ ಪ್ರಮುಖ ಲೇಖಕರಲ್ಲಿ ಒಬ್ಬರಾದ ಮೋಹನ್ ರಾಕೇಶ್, ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಮಹತ್ವದ ಕೊಡುಗೆಯನ್ನು ನೀಡಿರುವವರಾದರೂ ಅವರು ಬರೆದ ನಾಲ್ಕು ನಾಟಕಗಳಲ್ಲಿ (ಒಂದು ಅಪೂರ್ಣ) ಹಿಂದಿ ರಂಗಭೂಮಿ ಮತ್ತು ಇಡೀ ನಾಟಕ ಸಾಹಿತ್ಯದಲ್ಲಿ ಒಂದು ಸಂಚಲನವನ್ನು ಉಂಟುಮಾಡಿದೆ. ಹಿಂದಿ ಸಾಹಿತ್ಯಲೋಕಕ್ಕೆ ಕಥೆಗಾರರಾಗಿ ಪ್ರವೇಶಿಸಿದರೂ, ಎಲ್ಲ ಪ್ರಕಾರಗಳಲ್ಲಿಯೂ ಪ್ರಯೋಗಶೀಲರಾಗಿ, ಆಧುನಿಕ ಹಿಂದಿ ಸಾಹಿತ್ಯಕ್ಕೆ ಮಹತ್ವದ ಕೊಡುಗೆ ನೀಡಿದ್ದಾರೆ. 1925–1972ರ ವರೆಗಿನ ಅವರ ಜೀವಿತಕಾಲ ಅತ್ಯಲ್ಪವೇ ಆದರೂ 50ರ ಸುಮಾರಿನಲ್ಲಿ ಬರವಣಿಗೆಗೆ ತೊಡಗಿ ಕೇವಲ ಇಪ್ಪತ್ತೆರಡು ವರ್ಷಗಳಲ್ಲಿ ಸರಿ ಸುಮಾರು ಐವತ್ತು ಕೃತಿಗಳನ್ನು ನೀಡಿದ್ದಾರೆ.

ವ್ಯಕ್ತಿಯ ಅನುಭವವದಿಂದ ಮಾತ್ರವೇ ಸೃಜನಶೀಲ ಬರವಣಿಗೆ ಅರ್ಥಪೂರ್ಣವಾಗುತ್ತದೆ ಎಂದು ನಂಬಿದ್ದವರು ತಮ್ಮ ಜೀವನದ ಆಳವಾದ ಗಾಢವಾದ ಅನುಭವಗಳನ್ನೇ ತಮ್ಮ ಅಭಿವ್ಯಕ್ತಿಯ ದ್ರವ್ಯವಾಗಿಸಿಕೊಂಡರು.

ಸ್ವಾತಂತ್ರ್ಯೋತ್ತರ ಭಾರತದಲ್ಲಿ ಹಿಂದಿಯೂ ಸೇರಿದಂತೆ ಎಲ್ಲ ಪ್ರಾಂತೀಯ ಭಾಷಾ ಸಾಹಿತ್ಯ ಕ್ಷೇತ್ರಗಳಲ್ಲಿ ನವೋದಯ, ನವೀನ ಇತ್ಯಾದಿ ಹೆಸರುಗಳಲ್ಲಿ ಹೊಸ ಸಾಹಿತ್ಯ ಚಳುವಳಿ ಪ್ರಾರಂಭವಾಗಿ ಹಿಂದಿನ ಸಾಹಿತ್ಯ ಪರಂಪರೆಗಿಂತ ಭಿನ್ನರೀತಿಯಲ್ಲಿ ಬರೆಯುವ ಪ್ರಕ್ರಿಯೆ ಪ್ರಾರಂಭವಾಯಿತು. ವಸ್ತು, ಅಭಿವ್ಯಕ್ತಿ, ಆಶಯಗಳೆಲ್ಲದರಲ್ಲೂ ಹೊಸ, ದೃಷ್ಟಿಕೋನ ಅನಿವಾರ್ಯವಾಯಿತು. ಹೀಗಾಗಿ ಹಿಂದಿಯಲ್ಲಿ ನವೀನ ಸಾಹಿತ್ಯ ಯುಗ

ಸೃಷ್ಟಿಯಾಯಿತು. ಈ ಯುಗದ ಪ್ರಾತಿನಿಧಿಕ ಲೇಖಕರಲ್ಲಿ ಮೋಹನ್ ರಾಕೇಶರೂ ಕೂಡ ಒಬ್ಬರಾಗಿದ್ದರು. ಈ ಪ್ರಕಾರದ ಸಾಹಿತ್ಯದಲ್ಲಿ ಮತ್ತು ನವೀನ ಸಾಹಿತ್ಯ ಆಂದೋಲನದ ಭಾಗವಾಗಿದ್ದವರು ಆಲಂಕಾರಿಕತೆ, ಭಾಷಾ ಕ್ಲಿಷ್ಟತೆ, ಅತ್ಯಂತ ಭಾವುಕ ಕಥಾನಕಗಳನ್ನು ಪುರಾತನ ಮೌಲ್ಯಗಳನ್ನು ಅದರಲ್ಲಿಯೂ ಅವೈಚಾರಿಕವಾದವುಗಳನ್ನು ಬಿಟ್ಟು, ಮಧ್ಯಮವರ್ಗದ ಜನರ ಜೀವನ ಸಂಘರ್ಷಗಳನ್ನು ಮಾನಸಿಕ ತುಮುಲಗಳನ್ನು ಹೊಸ ಪರಿಸರ, ವೈಜ್ಞಾನಿಕ ಬೆಳವಣಿಗೆ, ಸಾಮಾಜಿಕ, ರಾಜಕೀಯ ಸ್ಥಿತ್ಯಂತರ, ಸಾಂಸ್ಕೃತಿಕ ಸಂಘರ್ಷಗಳು, ಬದಲಾಗುತ್ತಿದ್ದ ಜೀವನ ಮೌಲ್ಯಗಳು- ಹೀಗೆ ಹತ್ತು ಹಲವಾರು- ವಿಷಯಗಳನ್ನು ಕುರಿತು ನಡೆಸುವ ಅನುಸಂಧಾನದ ಫಲವಾಗಿ ಸೃಷ್ಟಿಯಾಗುತ್ತಿದ್ದ ಸಾಹಿತ್ಯ ಯಾವುದೇ ಪ್ರಕಾರದ್ದಾಗಲೀ ಮೇಲಿನವುಗಳನ್ನು ತಾತ್ವಿಕ ಚಿಂತನೆಗಳ ಪರಿವೇಶದೊಂದಿಗೆ ಬಿಂಬಿಸುವ ಪ್ರಯತ್ನಕ್ಕೆ ತೊಡಗಿದರು. ಅಂತಹ ಸಂದರ್ಭದಲ್ಲಿ ರಾಕೇಶರು ಸಾಮಾಜಿಕ ಸಮಸ್ಯೆಗಳಷ್ಟಕ್ಕೆ ಸೀಮಿತಗೊಳ್ಳದೆ, ಸಮಾಜದ ಕೇಂದ್ರವಾದ ವ್ಯಕ್ತಿಯನ್ನು ಮುಖ್ಯವಾಗಿಸಿಕೊಂಡರು. ಆದ್ದರಿಂದಲೇ ಅವರ ಬರಹಗಳಲ್ಲಿ ವೈಯಕ್ತಿಕ ಸಮಸ್ಯೆಗಳು ವ್ಯಕ್ತಿಯ ಆಂತರಿಕ ತುಮುಲಗಳ, ಮಧ್ಯಮ ವರ್ಗದ ಜನರ ವೈವಿಧ್ಯಮಯ ಅನುಭವಗಳ ಆಸೆ, ಆಕಾಂಕ್ಷೆಗಳ, ನೋವು ನಲಿವುಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸುವ ಪ್ರಯತ್ನ ಮಾಡಿದ್ದಾರೆ. ಸಾಮಾಜಿಕ ಚಿಂತನೆ ಪ್ರತಿಯೊಬ್ಬ ಲೇಖಕನ ಆದ್ಯ ಕರ್ತವ್ಯವೇ ಆದರೂ ಸಮಾಜ ನಿಂತಿರುವುದು ವ್ಯಕ್ತಿಗಳ ಮೇಲೆ. ಆದ್ದರಿಂದ ರಾಕೇಶರಿಗೆ ವೈಯಕ್ತಿಕ ಸಮಸ್ಯೆಗಳು- ಸ್ತ್ರೀ-ಪುರುಷ ಸಂಬಂಧಗಳು ಅವುಗಳ ವಿಭಿನ್ನ ಸ್ವರೂಪಗಳು - ಸಂಬಂಧಗಳಲ್ಲಿ ಉಂಟಾಗುವ ಬಿರುಕುಗಳು ಅವಕ್ಕೆ ಕಾರಣಗಳು,ಪರಂಪರಾಗತವಾಗಿ ಬಂದಿರುವ ಅರ್ಥ ಹೀನ ಆಚರಣೆಗಳ ಖಂಡನೆ ವ್ಯಕ್ತಿ ಸ್ವಾತಂತ್ರ್ಯದ ಅನಿವಾರ್ಯತೆ ಇತ್ಯಾದಿ ಅಂಶಗಳು ಮುಖ್ಯವಾಗುತ್ತವೆ.

ರಾಕೇಶರ ಅನುಭವ ಜಗತ್ತು ಅತ್ಯಂತ ವಿಶಾಲವಾದದ್ದು, ಹಿಂದಿ - ಇಂಗ್ಲಿಷ್ ಎರಡೂ ವಿಷಯದಲ್ಲಿ ಎಂ.ಎ. ಮಾಡಿರುವುದರಿಂದ ಎರಡೂ ಭಾಷಾ ಸಾಹಿತ್ಯಗಳಲ್ಲಿ ಆಳವಾದ ಅನುಭವವಿದೆ. ಅಧ್ಯಾಪಕರಾಗಿ, ಪತ್ರಕರ್ತರಾಗಿ, ಪತ್ರಿಕಾ ಸಂಪಾದಕರಾಗಿ ಕ್ರಿಯಾಶೀಲ ಬರಹಗಾರರಾಗಿ, ಅತ್ಯಲ್ಪ ಕಾಲದ ಬದುಕಿನ ಅವಧಿಯಲ್ಲಿ ಮೇರು ಸದೃಶ ಸಾಧನೆ ಮಾಡಿದ್ದಾರೆ. ವೈಯಕ್ತಿಕವಾಗಿ ಹೇಳುವುದಾದರೆ ರಾಕೇಶರು ಒಂದು ರೀತಿಯ ವಿರೋಧಾಭಾಸಗಳಿಂದ, ದ್ವಂದ್ವಗಳಿಂದ ಕೂಡಿದ, ಹಿಡಿದ ಕೆಲಸವನ್ನು ಪಟ್ಟು ಬಿಡದೆ ಸಾಧಿಸುವ ಮನೋಧರ್ಮವುಳ್ಳ ವ್ಯಕ್ತಿಯಾಗಿದ್ದಾರೆ.

ಕಥೆಗಳಿಂದಲೇ ಬರವಣಿಗೆಯನ್ನು ಪ್ರಾರಂಭಿಸಿದರು. ನಿಜ ಜೀವನದ ಅನುಭವಗಳೇ ಅವರ ಕಥೆಗಳ ಮೂಲ ದ್ರವ್ಯ. ಅವರ ದಿನಚರಿಯಲ್ಲಿ ದಾಖಲಿಸಿದ ವಿವರಗಳೊಂದಿಗೆ ಕಥೆಗಳಲ್ಲಿನ ವಿಚಾರಗಳನ್ನು ಹೋಲಿಸಿ ನೋಡಿದಾಗ ಅವರ ಅಂತರಂಗದ ಭಾವನೆಗಳು, ವಿಚಾರಗಳು, ನಿಲುವುಗಳು, ಪರಿಸ್ಥಿತಿಗಳು– ರಚನೆಗಳಲ್ಲಿ ವ್ಯಕ್ತವಾದ ಪಾತ್ರಗಳ ಪರಿಸ್ಥಿತಿ ಮತ್ತು ಮನಃ ಸ್ಥಿತಿಗಳಲ್ಲಿನ ಸಮಾನತೆಯನ್ನು ಗುರುತಿಸಬಹುದಾಗಿದೆ. 1950–72ರ ವರೆಗೆ ಸುಮಾರು ಅರವತ್ತಾರು ಕಥೆಗಳನ್ನು, 1961–68ರ ವರೆಗೆ ಮೂರು ಕಾದಂಬರಿಗಳನ್ನು 1959–75ರ ವರೆಗೆ ನಾಲ್ಕು ನಾಟಕಗಳನ್ನೂ 1973–74ರವರೆಗೆ ನಾಲ್ಕು ಏಕಾಂಕಗಳನ್ನೂ ಜೊತೆಗೆ ಪ್ರವಾಸಕಥನ, ಅನುವಾದಗಳು ದಿನಚರಿಗಳೂ ಸೇರಿ ಐವತ್ತು ಕೃತಿಗಳನ್ನು ಬರೆದಿದ್ದಾರೆ. ಇವೆಲ್ಲದರಲ್ಲೂ ವಸ್ತು ವೈವಿಧ್ಯವಿದ್ದರೂ ಮೂಲಭೂತವಾಗಿ ರಾಕೇಶರ ಆಸಕ್ತಿ ಸ್ತ್ರೀ–ಪುರುಷ ಸಂಬಂಧಗಳ ಕಡೆಗೇ ಕೇಂದ್ರೀಕರಿಸಿದೆಯೆನ್ನುವುದು ಸ್ಪಷ್ಟಗೋಚರವಾಗುತ್ತದೆ. 60–70ರ ದಶಕದಲ್ಲಿ ನಮ್ಮ ದೇಶದಲ್ಲಿ ಸ್ತ್ರೀ ಜಾಗೃತಿಯ ಪರಿಸರ ನಿರ್ಮಾಣವಾಗುತ್ತಿತ್ತು. ಸ್ತ್ರೀ ತನ್ನ ಅಸ್ಮಿತತೆಯನ್ನು ಗುರುತಿಸಿಕೊಳ್ಳಲು, ಸಾಮಾಜಿಕ, ರಾಜಕೀಯ, ಶೈಕ್ಷಣಿಕ ಹಕ್ಕುಗಳಿಗಾಗಿ ಬಿರುಸಿನ ಹೋರಾಟಕ್ಕೆ ಇಳಿದಿದ್ದಳು. ಇಂತಹ ಒಂದು ಪರಿಸರದಲ್ಲಿ ಸಹಜವಾಗಿ ಸ್ತ್ರೀ–ಪುರುಷ ಸಂಬಂಧಗಳಲ್ಲಿ ಘರ್ಷಣೆ– ವಿರಸಗಳು ಉದ್ಭವಿಸಿ, ಸ್ವತಂತ್ರ ಬದುಕಿನೆಡೆಗೆ ಸ್ವತಂತ್ರ ಅಸ್ತಿತ್ವಕ್ಕೆ ತುಡಿಯುವುದು ಸ್ವಾಭಾವಿಕ. ಆದರೆ ಪ್ರತ್ಯೇಕತೆ ಒಂಟಿತನಕ್ಕೆ ದಾರಿ ಮಾಡಿದಾಗ, ನೋವು– ನರಳಿಕೆ ನಿರಾಶೆ– ಹತಾಶೆಗಳೇ ಅಂತಿಮವಾಗಿ ಸಿಗುವ ಪುರಸ್ಕಾರ ಎನ್ನುವುದು ರಾಕೇಶರ ಸ್ವ ಅನುಭವದ ಮೂಲಕ ಚಿತ್ರಣಗೊಳ್ಳುವುದರಿಂದ, ಅವು ಹೃದಯ ಸ್ಪರ್ಶಿ ಎನಿಸುತ್ತವೆ. ಅವರ ಕಥೆ, ನಾಟಕಗಳಲ್ಲಿ ಆದ್ದರಿಂದಲೇ ಯಾವ ಗಂಡೂ ಹೆಣ್ಣು ಸುಖಿಯಾಗಿ ಕಾಣುವುದಿಲ್ಲ. ಈ ಇಬ್ಬರ ನಡುವೆ– ಪ್ರೀತಿ– ಆನಂದ– ಪೂರ್ಣತೆ–ಸಮರ್ಪಣಾ ಭಾವನೆಗಳ ಚಿತ್ರಣ ಅಪರೂಪವೇ ಆಗಿದೆ. ಪರಸ್ಪರ ವಿರಸ, ದ್ವೇಷ, ಅಗಲಿಕೆ, ನೋವು, ಮನಸ್ತಾಪ ಇತ್ಯಾದಿಗಳು, ವೈಯಕ್ತಿಕ ಕಾರಣಗಳಿಂದಲೇ ಆಗಿರಬಹುದು ಅಥವಾ ಪರಿಸ್ಥಿತಿ, ಸಂದರ್ಭಗಳಿಂದ ಸೃಷ್ಟಿಯಾಗಿರುವುದಾದರೂ ಆಗಿರಬಹುದು, ಇವುಗಳೇ ಹೆಚ್ಚು ಕಾಣಿಸಿಕೊಳ್ಳುತ್ತವೆ. ಅವರು ಬರೆದಿರುವ ನಾಟಕಗಳನ್ನು ಇಂತಹ ಒಂದು ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ ಹೆಚ್ಚು ಅರ್ಥಪೂರ್ಣವಾಗಿ ಗೋಚರಿಸುತ್ತವೆ. ಬರೆದ ನಾಲ್ಕು ನಾಟಕಗಳಲ್ಲಿ 'ಆಷಾಡ್ ಕಾ ಏಕದಿನ್' ಮತ್ತು 'ಆಧೆ ಅಧೂರೆ ರಂಗ ಪ್ರಯೋಗದ ದೃಷ್ಟಿಯಿಂದಲೂ ಅತ್ಯಂತ ಯಶಸ್ವಿ ನಾಟಕಗಳಾಗಿ,

ಪ್ರದರ್ಶನಗೊಂಡಿವೆ. ಹೆಣ್ಣು-ಗಂಡು ಸಂಬಂಧಗಳಲ್ಲಿನ ವಿಭಿನ್ನ ನೆಲೆಗಳನ್ನು ಈ ನಾಟಕಗಳಲ್ಲಿ ಚರ್ಚಿಸಿದ್ದಾರೆ. ಅಷ್ಟೇ ಅಲ್ಲದೆ ಆಷಾಢ್‌ಕಾ ಏಕ್ ದಿನ್ ನಾಟಕದಲ್ಲಿ ಪ್ರಭುತ್ವ ಹಾಗೂ ಸೃಜನಶೀಲತೆಗಳು ಮುಖಾಮುಖಿಯಾದಾಗ ಪ್ರಭುತ್ವದ ಮೂಲಕ ದೊರೆಯುವ ಸುಖ ಸೌಲಭ್ಯಗಳು ಸನ್ಮಾನಗಳು ಹೇಗೆ ಸೃಜನಶೀಲತೆಯನ್ನು ಹಿಸುಕಿ ಹಾಕುತ್ತವೆ ಎನ್ನುವುದನ್ನು ಕಾಳಿದಾಸನ ಬದುಕಿನ ಪ್ರಸಂಗದ ಮೂಲಕ ಹೇಳಲು ಹೊರಟಿದ್ದಾರೆ. ಕಾಲ, ಪರಿಸರ ಯಾವುದೇ ಆದರೂ ಮನುಷ್ಯ ಸ್ವಭಾವಗಳು, ನಡವಳಿಕೆಗಳು ಎಂದೆಂದಿಗೂ ಒಂದೇ ತೆರನಾಗಿರುತ್ತವೆ. ರಾಜತ್ವದ ಖುಷಾ ಮುದಿಯ ಮೂಲಕ ತಮ್ಮ ಸ್ವಲಾಭಕ್ಕಾಗಿ ಹಾತೊರೆಯುವ ಮಂದಿ ಎಲ್ಲ ಕಾಲದಲ್ಲೂ ಸಿಗುತ್ತಾರೆನ್ನುವುದಕ್ಕೆ ಸಮಕಾಲೀನ ಸಂದರ್ಭವನ್ನೇ ಎತ್ತಿ ತೋರಿಸುತ್ತಾರೆ. ಅರಮನೆಯ ನೌಕರರು, ಸುಹಾಸಿನಿಯರು, ಪ್ರಿಯಂಗುಮಂಜರಿ ಮಾತುಲ, ವಿಲೋಮ- ಹೀಗೆ ಎಲ್ಲರಿಗೂ ಅವರವರದೇ ಸ್ವಾರ್ಥವಿದೆ. ಆದರೆ ಸ್ವಾರ್ಥ ಸುಖಗಳ ಆಮಿಷಕ್ಕೆ ಒಳಗಾಗದೆ ಭಾವನಾತ್ಮಕತೆಯನ್ನೇ ಬದುಕಿನ ಉಸಿರಾಗಿಸಿ ಬಾಳಲು ಪ್ರಯತ್ನಿಸುವಂತಹ ಮತ್ತು ನಿಷ್ಕಲ್ಮಶ ಪ್ರೇಮದ ಮಲ್ಲಿಕಾ, ಕಾಳಿದಾಸನ ಕೀರ್ತಿ, ಯಶಸ್ಸು, ಪ್ರಗತಿಯನ್ನು ಮಾತ್ರವೇ ಬಯಸುವವಳಿಗೆ ಬದುಕಿನ ದುಃಖದ ದುರಂತವೆ ಅವಳ ಪಾಲಿನ ಭವಿಷ್ಯವಾಗುತ್ತದೆ; ಕಾಳಿದಾಸನಲ್ಲಿ ಇಟ್ಟುಕೊಂಡಿದ್ದ ನಿರೀಕ್ಷೆಗಳೆಲ್ಲ ಕುಸಿದು ಬೀಳುತ್ತವೆ. ಕಾಳಿದಾಸನಿಂದ ಉದ್ದೇಶ ಪೂರ್ವಕವಾಗಿ ಅಲ್ಲದಿದ್ದರೂ, ತನ್ನನ್ನೇ ತನ್ನ ಬದುಕಾಗಿ ಭಾವಿಸಿದ್ದ ಮಲ್ಲಿಕಾಳನ್ನು ವಂಚಿಸುತ್ತಾನೆ. ಮಲ್ಲಿಕಾಳಿಗಾಗಿ ಹಿಂತಿರುಗುವುದಕ್ಕಿಂತ ಕಳೆದು ಹೋಗುತ್ತಿರುವ ಸೃಜನಶೀಲತೆಯನ್ನು ಮರಳಿ ಪಡೆಯಲು ಹಿಂದಿನ ಪರಿಸರದೊಂದಿಗೆ ಮರುಹುಟ್ಟು ಪಡೆಯಲು ಬರುತ್ತಾನೆ. ಮೊದಲಿನಿಂದಲೂ ಅಂಬಿಕಾಳನ್ನು ಕಾಡಿದ ಭೀತಿ ಭಯಂಕರ ಸತ್ಯವಾಗಿ ಮಲ್ಲಿಕಾಳ ಮುಂದೆ ನಿಲ್ಲುತ್ತದೆ. ಹೀಗಾಗಿ ಇಲ್ಲಿಯೂ ಮಲ್ಲಿಕಾಳಿಗಾಗಲಿ ಕಾಳಿದಾಸನಿಗಾಗಲಿ ಸುಖವೇ ಇಲ್ಲವಾಗಿ ಶಾಶ್ವತ ಅಗಲಿಕೆಯೇ ಅವರಿಬ್ಬರ ಅನನ್ಯ ಪ್ರೀತಿಯ ಪರಿಣಾಮವಾಗಿ ಕಾಣಿಸುತ್ತದೆ.

**ಆಷಾಢದ ಒಂದು ದಿನ**

'ಆಷಾಡ್‌ಕಾ ಏಕ್ ದಿನ್' ನಾಟಕದ ಕನ್ನಡ ಭಾಷಾಂತರ ಕೃತಿಯ ವಸ್ತು ಮಹಾಕವಿ ಕಾಳಿದಾಸನ ಜೀವನಕ್ಕೆ ಸಂಬಂಧಿಸಿದ್ದು ಕಾಳಿದಾಸ ಐತಿಹಾಸಿಕ ವ್ಯಕ್ತಿಯೇ ಕಲ್ಪಿತವೇ ಎನ್ನುವುದು ಖಚಿತವಾಗಿಲ್ಲ. ಕಾಳಿದಾಸನ ಹೆಸರಿನಲ್ಲಿನ ಕೃತಿಗಳು ಲಭ್ಯವಿರುವುದರಿಂದ ಅವನು ಐತಿಹಾಸಿಕ ವ್ಯಕ್ತಿಯೇ ಎನ್ನುವುದು ಸತ್ಯ. ಸರಿಯಾದ ಲಿಖಿತ ದಾಖಲೆಗಳು

ಜೀವನ ವಿವರಗಳು ದೊರೆಯದೆ ಹೋದಾಗ, ದಂತಕತೆಗಳು, ಕಪೋಲ ಕಲ್ಪಿತಗಳು ಸಾಕಷ್ಟು ಹರಿದಾಡುತ್ತವೆ. ರಾಕೇಶರು ಕಲ್ಪನೆಯ ನೆರವಿನೊಂದಿಗೆ ಈ ನಾಟಕದಲ್ಲಿನ ಜೀವನ ಚಿತ್ರವನ್ನು ಸೃಷ್ಟಿಸಿಕೊಂಡಿದ್ದಾರೆ. ಇಲ್ಲಿನ ಕಥಾವಸ್ತುವಿನೊಂದಿಗೆ ಹಲವಾರು ಸಮಕಾಲೀನ ಚಿಂತನೆಗಳನ್ನೂ ಸಮೀಕರಣಗೊಳಿಸುವ ಪ್ರಯತ್ನವನ್ನು ಮಾಡಿದ್ದಾರೆ. ಈ ನಾಟಕದ ಪ್ರಮುಖ ಪಾತ್ರಗಳು ಮಲ್ಲಿಕಾ ಕಾಳಿದಾಸರೇ ಆಗಿದ್ದರೂ ಶೀರ್ಷಿಕೆಯನ್ನು ಆಷಾಢದ ಒಂದು ದಿನ ಎಂದು ನೀಡಿರುವುದು ಧ್ವನಿಪೂರ್ಣವಾಗಿದೆ. ನಾಟಕದ ಒಳ ಹೂರಣದ ದೃಷ್ಟಿಯಿಂದ ಮತ್ತು ಉದ್ದಕ್ಕೂ ಮಲ್ಲಿಕಾಳ ಬದುಕಿನಲ್ಲಿ ಉಂಟಾಗುವ ತಿರುವುಗಳು ಕಂಡರೂ ಮೊದಲ ಅಂಕ ಆಷಾಢದ ಮಳೆಗಾಲದ ಒಂದು ದಿನ ನಡೆಯುವ ಘಟನೆಯಿಂದ ಪ್ರಾರಂಭವಾಗುತ್ತದೆ. ಎರಡನೆ ಅಂಕ ಅವರಿಬ್ಬರ ಬದುಕುಗಳಲ್ಲಿ ಉಂಟಾಗುವ ಸ್ಥಿತ್ಯಂತರಗಳನ್ನು ಹೇಳಿದರೆ ಕಡೆಯ ಅಂಕ ಮತ್ತೆ ಮೊದಲ ಅಂಕದ ಪುನರಾವರ್ತನೆಯಾಗುತ್ತದೆ. ಹೊರ ಪ್ರಕೃತಿ ಅವರಿಬ್ಬರ ಒಳ ಪ್ರಕೃತಿಯ ಪ್ರತಿಬಿಂಬವಾಗುತ್ತದೆ. ಮಳೆ, ಮೋಡ, ಗರ್ಜನೆ, ಗುಡುಗು, ಸಿಡಿಲು – ಇವೆಲ್ಲವೂ ಮನಃ ಸ್ಥಿತಿಯ ಬಿಂಬರೂಪಗಳೆನಿಸುತ್ತವೆ.

**ಕಥೆಯ ಸಾರಾಂಶ :**

ಆಷಾಢದ ದಿನಗಳು ಧಾರಾಕಾರವಾಗಿ ಮಳೆ ಸುರಿಯುತ್ತಿದೆ. ಇಂಥ ಒಂದು ಪರಿಸರದಲ್ಲಿ ಮಲ್ಲಿಕಾ ಮಳೆಯಲ್ಲಿ ತೋಯಿಸಿಕೊಂಡು ಕಾಳಿದಾಸನ ಸನಿಹದ ಸಾಂಗತ್ಯದ ಸುಖಾನುಭೂತಿಯ ಧಾರೆಯಿಂದಲೂ ತೊಯ್ದು ಬರುತ್ತಾಳೆ. ಮಲ್ಲಿಕಾ ಭಾವ ಜೀವಿ, ಜೀವನಾನುಭವ ಮತ್ತು ವ್ಯವಹಾರ ಜ್ಞಾನ ಇಲ್ಲದವಳು. ತಾಯಿ ಅಂಬಿಕಾಳಿಗೆ ಕಾಳಿದಾಸನೊಂದಿಗೆ ಮಗಳು ಸಲಿಗೆಯಿಂದಿರುವುದು ಸಹಿಸುವುದಿಲ್ಲ. ಮೊದಲಿನಿಂದಲೂ ಅವಳಿಗೆ ಆಂತರಿಕವಾಗಿ ಭಯವಿದೆ. ಕಾಳಿದಾಸ ಸ್ವಕೇಂದ್ರಿತ ವ್ಯಕ್ತಿ ಎನ್ನುವುದು ಅವಳ ನಂಬಿಕೆ. ಮಲ್ಲಿಕಾಳನ್ನು ತನ್ನನ್ನು ತಾನು ಪ್ರೀತಿಸೋದಕ್ಕೆ ಒಂದು ವಸ್ತುವನ್ನಾಗಿ ಮಾಡಿ ಕೊಂಡಿದ್ದಾನೆಯೇ ಹೊರತು ನಿಜವಾದ ಪ್ರೀತಿ ಇಲ್ಲ ಎಂಬುದು ಅವಳ ತರ್ಕ. ಆದ್ದರಿಂದಲೇ ಎಂದಿಗೂ ಕಾಳಿದಾಸ ಮಲ್ಲಿಕಾಳನ್ನು ಸ್ವೀಕರಿಸುವುದಿಲ್ಲವೆಂಬ ದೃಢ ನಿಲುವು. ತಾಯಿ ಮಗಳ ನಡುವೆ ಸಂಭಾಷಣೆ ನಡೆಯುತ್ತಿರುವಾಗಲೇ ರಾಜಪ್ರತಿನಿಧಿ ಕಾಳಿದಾಸನನ್ನು ಆಹ್ವಾನಿಸಲು ಬರುತ್ತಾನೆ. ಮೊದಮೊದಲು ಕಾಳಿದಾಸ ಅವರ ಕೈಗೆ ಸಿಗದೆ, ಹೋಗಲು ಇಷ್ಟವಿಲ್ಲದೆ ತಲೆ ಮರೆಸಿಕೊಳ್ಳುತ್ತಾನೆ. ಆದರೆ ಕಡೆಗೆ ನಿಕ್ಷೇಪ ಮತ್ತು ಮಲ್ಲಿಕಾ ಇಬ್ಬರ ದೃಷ್ಟಿಯಲ್ಲೂ ಕಾಳಿದಾಸ ಈ ಅವಕಾಶವನ್ನು ಬಿಟ್ಟು

ಬಿಡಬಾರದೆಂಬುದಾಗಿರುತ್ತದೆ. ಎಲ್ಲರ ಆಶಯ ಮತ್ತು ಕಡೆಗೆ ತಾನೂ ಸಂದಿಗ್ಧದಿಂದ ಹೊರ ಬಂದು ರಾಜಸನ್ಮಾನ ಸ್ವೀಕರಿಸಲು ಹೋಗಲು ಸಿದ್ಧನಾಗುತ್ತಾನೆ. ಅಲ್ಲಿಗೆ ಹೋಗಿ ರಾಜಭೋಗಗಳ ನಡುವೆ ಕಾವ್ಯಗಳನ್ನೂ ಬರೆಯುತ್ತಾನೆ. ಪ್ರಿಯಂಗು ಮಂಜರಿಯನ್ನೂ ಮದುವೆಯಾಗುತ್ತಾನೆ. ಆದರೆ ಕ್ರಮೇಣ ತಾನು ಆರಿಸಿಕೊಂಡ ಬದುಕು ಅವನಿಗೆ ಅಸಹನೀಯವಾಗುತ್ತದೆ. ಪೂರ್ವದ ಬದುಕು, ಹಳ್ಳಿಗಾಡಿನ ಸುಂದರ ನೈಸರ್ಗಿಕ ಪರಿಸರ ಅವನನ್ನು ಸೆಳೆಯುತ್ತಲೇ ಇರುತ್ತದೆ. ಇದರ ಸೂಕ್ಷ್ಮವರಿತ ಪ್ರಿಯಂಗು ಮಂಜರಿ, ಅವನು ಹಿಂದೆ ಇದ್ದ ಪರಿಸರವನ್ನು ರಾಜಧಾನಿಯಲ್ಲಿ ನಿರ್ಮಿಸಿ ಅವನ ವಿಷಣ್ಣತೆಯನ್ನು ದೂರ ಮಾಡುವ ಪ್ರಯತ್ನವನ್ನೂ ಮಾಡುತ್ತಾಳೆ. ಆದರೆ ಅವನಿಗೆ ಮೊದಲಿನ ಸೃಜನಾತ್ಮಕತೆ ಸಾಧ್ಯವಾಗುವುದೇ ಇಲ್ಲ. ಅಲ್ಲಿದ್ದು ಬರೆದ ಕೃತಿಗಳೂ ಕೂಡಾ ಹಿಂದಿನ ಸ್ಮೃತಿಗಳ ಪ್ರೇರಣೆಯಿಂದಲೇ, ಸ್ಫೂರ್ತಿಯಿಂದಲೇ! ಹಾಗಾಗಿ ಕಾಳಿದಾಸ ಹೊಸ ಪರಿಸರ, ಹೊಸ ಹೆಸರು ಎಲ್ಲವನ್ನೂ ತ್ಯಜಿಸಿ ಹಿಂದಿರುಗಿ ಬರುತ್ತಾನೆ ಆದರೆ ಅವನು ಬರುವಷ್ಟರಲ್ಲಿ ಮಲ್ಲಿಕಾಳ ಬದುಕು ದಯನೀಯ ಸ್ಥಿತಿಯನ್ನು ತಲುಪಿರುತ್ತದೆ. ತನ್ನ ಬಗ್ಗೆ ತಿಳಿದು ಬಂದ ರಾಜಕುಮಾರಿ ಪ್ರಿಯಂಗುವಿನ ಎಲ್ಲ ಸಹಾಯವನ್ನು ಮಲ್ಲಿಕಾ ನಿರಾಕರಿಸುತ್ತಾಳೆ. ಅವಳ ಮಾತಿನಲ್ಲಿ ಅಧಿಕಾರ, ಹಣದ ಅಹಂಕಾರ ತುಂಬಿರುವುದನ್ನು ಗಮನಿಸುತ್ತಾಳೆ. ಅಂಬಿಕಾಳ ಕಾಳಿದಾಸನ ಬಗೆಗಿನ ಕಟುಮಾತುಗಳು ಮಲ್ಲಿಕಾಳನ್ನು ನೋಯಿಸುತ್ತದೆ. ಬಡತನ ಒಂದು ಕಡೆಯಾದರೆ ತಾಯಿಯ ಖಾಯಿಲೆ ಮತ್ತೊಂದು ಕಡೆ. ಮಲ್ಲಿಕಾ ಹತಾಶ ಸ್ಥಿತಿ ತಲುಪುತ್ತಾಳೆ. ತನ್ನ ಪರಿಸ್ಥಿತಿ, ಲೋಕದ ಜನರ ಅಪನಿಂದೆಗಳು ಅವಳನ್ನು ಜರ್ಝರಿತಳನ್ನಾಗಿ ಮಾಡುತ್ತವೆ. ತಾಯಿಯ ಸಾವು ಮತ್ತೊಂದು ಆಘಾತವಾಗಿ ಪರಿಣಮಿಸುತ್ತದೆ. ನಿರಾಶೆ ಹತಾಶೆ, ಅಸಹಾಯಕತೆಗಳ ಕಪಿಮುಷ್ಠಿಯಲ್ಲಿ ಸಿಲುಕಿರುವಾಗ ಮೊದಲಿನಿಂದಲೂ ಅವಳ ಮೇಲೆ ಕಣ್ಣಿಟ್ಟಿದ್ದ ವಿಲೋಮ ಈ ಅವಕಾಶವನ್ನು ಬಳಸಿಕೊಂಡು ಮಲ್ಲಿಕಾ ತನ್ನನ್ನು ಸ್ವೀಕರಿಸಲೇ ಬೇಕಾದ ವಿವಶತೆಗೆ ದೂಡುತ್ತಾನೆ. ಆದರೂ ಮಲ್ಲಿಕಾಳ ಹೃದಯದಲ್ಲಿ ಕಾಳಿದಾಸನೇ ನೆಲೆಗೊಂಡಿರುತ್ತಾನೆ.

ಇಂಥ ಒಂದು ಸಂದಿಗ್ಧ ಸಮಯದಲ್ಲಿ ಕಾಳಿದಾಸ ಕಾಶ್ಮೀರದ ರಾಜ ಸಿಂಹಾಸನ, ಅರಮನೆ ಅಧಿಕಾರ, ರಾಜ ಕುಮಾರಿ, ರಾಜಭೋಗಗಳೆಲ್ಲದರ ಬಗ್ಗೆ ಭ್ರಮನಿರಸನಗೊಂಡು ಮರಳಿ ಗೂಡಿಗೆ ಹಿಂತಿರುಗುತ್ತಾನೆ. ಅಲ್ಲಿಂದ ಹೊರಟ ದಿನದಂದಿನ ವಾತಾವರಣವೇ ಅವನು ಬಂದಾಗಲೂ ಎದುರುಗೊಳ್ಳುತ್ತದೆ.

ಪೂರ್ವಸ್ಥಿತಿಯಲ್ಲಿಯೇ ಮಲ್ಲಿಕಾ ಇರುತ್ತಾಳೆ. ಅವೇ ಭಾವ ತಂತುಗಳಿಂದ ಮತ್ತೆ ಬೆಸೆದುಕೊಳ್ಳುತ್ತೇವೆ, ಮತ್ತೆ ನನ್ನ ಕಾವ್ಯ ರಚನೆಗೆ ಅವಳ ಪ್ರೀತಿ ಹಸನಾದ ಭೂಮಿಯನ್ನು ಒದಗಿಸುತ್ತದೆ ಎಂದೆಲ್ಲ ನಿರೀಕ್ಷೆಗಳನ್ನು ಇರಿಸಿಕೊಂಡು ಬಂದ ಕಾಳಿದಾಸನಿಗೆ ಎದುರಾದ ಮಲ್ಲಿಕಾ ಒಬ್ಬ ಬೆಲೆವೆಣ್ಣಾಗಿರುತ್ತಾಳೆ. ಪರಿಸ್ಥಿತಿಗಳು ಅವಳನ್ನು ಆ ಹಂತಕ್ಕೆ ದೂಡಿರುತ್ತವೆ. ದೈಹಿಕವಾಗಿ ಪರ ಪುರುಷನಿಗೆ ತನ್ನನ್ನು ಕೊಟ್ಟು ಕೊಂಡಿದ್ದರೂ ಅವಳೆದೆಯಲ್ಲಿ ಹಸಿರಾಗಿ ಉಳಿದಿರುವ ನೆನಪೆಂದರೆ ಕಾಳಿದಾಸ ಮಾತ್ರ. ಕಾಳಿದಾಸನೂ ಕೂಡಾ ಮಲ್ಲಿಕಾಳಿಗೆ, ತಾನು ಅಧಿಕಾರದ ಮೋಹ ಒಡೆತನಗಳನ್ನು ಬಿಟ್ಟು, ಎಲ್ಲ ಬಂಧನ ಗಳಿಂದಲೂ ಮುಕ್ತನಾಗಿ, ಮತ್ತೊಮ್ಮೆ ಕಾಳಿದಾಸನಾಗಿ ಬದುಕಬೇಕೆಂದು ಬಂದಿದ್ದೇನೆಂದು ನಂಬಿಸಲು ಪ್ರಯತ್ನಿಸುತ್ತಾನೆ. ಆದರೆ ಅವಳ ವಾಸ್ತವ ಪರಿಸ್ಥಿತಿಯನ್ನು ಅರಿತ ಮೇಲೆ ಯಾವುದೇ ಪ್ರತಿಕ್ರಿಯೆಯಿಲ್ಲದೆ.  ಅವಳನ್ನು ಅವಳ ವಿಧಿಗೆ ಬಿಟ್ಟು. ಹೋಗುವುದು, ಅವನ ಬಗೆಗಿನ ಸಹಾನುಭೂತಿಯನ್ನು ನುಚ್ಚುನೂರು ಮಾಡುತ್ತದೆ. ಮೊದಲಿನಂತೆ ಬದುಕ ಬಂದವನು ಪರಿಸ್ಥಿತಿಗೆ ಸವಾಲೊಡ್ಡಿ ಮಲ್ಲಿಕಾಳಿಗೆ ಆಸರೆಯಾಗಿ ನಿಲ್ಲಬಹುದಾಗಿದ್ದವನು ಹೇಡಿಯಂತೆ ಪರಿಸ್ಥಿತಿಗೆ ಬೆನ್ನು ತಿರುಗಿಸಿ ಓಡಿ ಹೋಗುತ್ತಾನೆ. ಆತ್ಮ ಸಂಘರ್ಷ ಪಶ್ಚಾತ್ತಾಪಗಳಿಗೂ ಒಳಗಾಗದೆ ಹೋಗುವುದು ಒಂದು ವಿಚಿತ್ರವೆನಿಸುತ್ತದೆ. ನಾಟಕದ ಆರಂಭದಲ್ಲಿನ ಅಂಬಿಕಾಳ ಮಾತುಗಳೇ ಭವಿಷ್ಯವಾಣಿ ಯಾಗಿ ಮಾರ್ದನಿಸುತ್ತವೆ.

* * *

# ನನ್ನ ಮಾತು

ಆಧುನಿಕ ಹಿಂದೀ ಸಾಹಿತ್ಯದ ಹೆಸರಾಂತ ಲೇಖಕ ಮೋಹನ್ ರಾಕೇಶರು ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಪ್ರಯೋಗಶೀಲರಾಗಿ ಹಲವಾರು ಕೃತಿಗಳನ್ನು ನೀಡಿದ್ದರೂ. ಹಿಂದಿ ನಾಟಕ ಸಾಹಿತ್ಯದಲ್ಲಿ ಅವರದು ಅತ್ಯಂತ ಮಹತ್ವದ ಹೆಸರಾಗಿದೆ. ಅವರು ಬರೆದದ್ದು ಮೂರು ನಾಲ್ಕು ನಾಟಕಗಳಷ್ಟೇ ಆದರೂ ಹಿಂದೀ ರಂಗಭೂಮಿಯಲ್ಲಷ್ಟೇ ಅಲ್ಲದೆ ಇಡೀ ಭಾರತೀಯ ರಂಗ ಚರಿತ್ರೆಯಲ್ಲಿ ಮತ್ತು ರಂಗಭೂಮಿಯಲ್ಲಿ ಸಹಸ್ರಾರು ಪ್ರದರ್ಶನಗಳನ್ನು ಕಂಡಿವೆ. ಇಂತಹ ಅನನ್ಯ ನಾಟಕಕಾರನ ನಾಟಕಗಳಲ್ಲಿ ಒಂದಾದ 'ಆಷಾಢ್ ಕಾ ಏಕ್‌ದಿನ್' ಮತ್ತೂ ಹೆಚ್ಚಿನ ಖ್ಯಾತಿಗೆ ಒಳಗಾಗಿದೆ. ಈ ನಾಟಕ ಹಲವಾರು ಭಾರತೀಯ ಭಾಷೆಗಳಿಗೆ ಅನುವಾದಗೊಂಡಿದೆ. ಅದೇ ರೀತಿಯಲ್ಲಿ ಕನ್ನಡ ರಂಗಭೂಮಿಗಾಗಿ ಆರ್. ನಾಗೇಶ್ ಅವರು ಸುಮಾರು ಇಪ್ಪತ್ತೈದು ವರ್ಷಗಳಿಗೂ ಹಿಂದೆ. ಇದನ್ನು ಕನ್ನಡಕ್ಕೆ ಅನುವಾದಿಸಿ ಕೊಡಲು ನನಗೆ ಕೇಳಿಕೊಂಡದ್ದರ ಕಾರಣ, ಅನುವಾದವನ್ನೇನೋ ಮಾಡಿದೆ. ಆದರೆ ನಾಗೇಶ್ ಅವರು ಯಾಕೋ ಪ್ರಯೋಗ, ಪ್ರದರ್ಶನವನ್ನು ಮುಂದೂಡುತ್ತಲೇ ಬಂದಿದ್ದರು. ಅದೃಷ್ಟವಶಾತ್ ಅನುವಾದದ ಹಸ್ತಪ್ರತಿ ಮೈಸೂರಿನ ರಂಗಕರ್ಮಿ ಮತ್ತು ನಾಟಕಕಾರರೂ ಆದ ಡಾ. ನಾ. ರತ್ನ ಅವರ ಕೈ ಸೇರಿತು. ಅನುವಾದವನ್ನು ಅಂತರ ಕಾಲೇಜ್ ನಾಟಕ ಸ್ಪರ್ಧೆಗಾಗಿ ಅದನ್ನು ಬಳಸಿಕೊಳ್ಳಲು ಯೋಚಿಸಿ, ಉಲ್ಲಾಳ್ ಶೀಲ್ಡ್‌ಗಾಗಿ ಅದನ್ನು ಪ್ರದರ್ಶಿಸಿದರು. ಅದಕ್ಕೆ ಅನೇಕ ಬಹುಮಾನಗಳೊಂದಿಗೆ ಪರ್ಯಾಯ ಪಾರಿತೋಷಕವೂ ಲಭಿಸಿತು. ಪ್ರಯೋಗವಾದಾಗ ನನಗೆ ತಿಳಿಯಲಿಲ್ಲವಾದರೂ ನಂತರ ಟಿ.ಜಿ. ರಾಘವ ಅವರಿಂದ

ಅವರು ಪ್ರಯೋಗಕ್ಕೆ ತೆಗೆದುಕೊಂಡದ್ದು ನನ್ನ ಅನುವಾದವೆಂಬುದು ತಿಳಿದು ಬಂತು. ಡಾ. ರತ್ನ ಅವರಿಗೆ ಇದರ ಬಗ್ಗೆ ವಿಚಾರಿಸಿದೆ. ಅವರು ಹಸ್ತಪ್ರತಿಯನ್ನು ನಾಗೇಶರಿಂದ ಪಡೆದ ವಿಷಯವನ್ನು ತಿಳಿಸಿ, ನನ್ನ ಪರಿಚಯವಿರಲಿಲ್ಲವಾದ ಕಾರಣ. ಸಂಪರ್ಕಿಸಲು ಸಾಧ್ಯವಾಗಲಿಲ್ಲವೆಂದೂ, ತಮ್ಮಿಂದಾದ ತಪ್ಪಿಗೆ ಕ್ಷಮೆ ಕೋರಿದರು. ಒಟ್ಟಿನಲ್ಲಿ ನನ್ನ ಅನುವಾದ ಪ್ರಯೋಗಕ್ಕೆ ಒಳಗಾದದ್ದು ನನಗೆ ಹೆಚ್ಚಿನ ಸಂತೋಷವನ್ನು ನೀಡಿತು. ನಂತರ ಅನುವಾದವನ್ನು ಎಂ.ಎ. ವಿದ್ಯಾರ್ಥಿಗಳಿಗೆ ಭಾರತೀಯ ಸಾಹಿತ್ಯದಲ್ಲಿನ ಪಠ್ಯವಾಗಿ ಅದನ್ನು ಬೋಧಿಸಿದೆ. ಆದರೆ ಯಾಕೊ ಪ್ರಕಟಿಸಲು ಮನಸ್ಸು ಮಾಡಿರಲಿಲ್ಲ. ಈಗ ಮತ್ತೆ ನನ್ನ ಕೆಲವು ಪುಸ್ತಕಗಳನ್ನು ಪ್ರಕಟಿಸಿ, ಈಗಲೂ ಪ್ರಕಟಿಸಲು ಮುಂದಾಗಿರುವ ಸಿವಿಜಿ ಚಂದ್ರು ಅವರಲ್ಲಿ ಇದರ ಬಗ್ಗೆ ಸಾಂದರ್ಭಿಕವಾಗಿ ಪ್ರಸ್ತಾಪ ಮಾಡಿದಾಗ, ಇಂತಹ ಮಹತ್ವದ ಕೃತಿಯನ್ನು ಖಂಡಿತವಾಗಿಯೂ ಪ್ರಕಟಿಸುತ್ತೇನೆಂದು ಹೇಳಿದಾಗ ನನಗೆ ನನ್ನ ಕೃತಿಯನ್ನು ಸೆರೆಯಿಂದ ಬಿಡಿಸಿದಂತಾಗಿ ಕೂಡಲೇ ಅವರಿಗೆ ಕೊಟ್ಟೆ. ಈಗ ಅವರ ಸ್ನೇಹ, ಪ್ರೀತಿಗಳಿಂದಾಗಿ, 'ಆಷಾಢದ ಒಂದು ದಿನ' ಹೆಸರಿನಲ್ಲಿ ಬೆಳಕು ಕಾಣುತ್ತಿದೆ. ಅದಕ್ಕಾಗಿ ನಾನು ಚಂದ್ರು ಅವರಿಗೆ ಹೃತ್ಪೂರ್ವಕವಾದ ಕೃತಜ್ಞತೆ ಸಲ್ಲಿಸುತ್ತಿದ್ದೇನೆ. ಮೋಹನ್ ರಾಕೇಶರಂತಹವರ ನಾಟಕ ಕನ್ನಡದ ಓದುಗರು ಪ್ರೀತಿಯಿಂದ ಸ್ವೀಕರಿಸುತ್ತಾರೆಂದೂ, ರಂಗಾಸಕ್ತರು ಇದರ ಪ್ರಯೋಗ, ಪ್ರದರ್ಶನಗಳಿಗೆ ಮುಂದಾಗುತ್ತಾರೆಂದೂ ನಂಬಿದ್ದೇನೆ.

**ಡಾ. ವಿಜಯಾ ಸುಬ್ಬರಾಜ್**

## ಪಾತ್ರವರ್ಗ

| | | |
|---|---|---|
| ಅಂಬಿಕಾ | : | ಹಳ್ಳಿಯ ವೃದ್ಧೆ |
| ಮಲ್ಲಿಕಾ | : | ವೃದ್ಧೆಯ ಮಗಳು |
| ಕಾಳಿದಾಸ | : | ಕವಿ (ಮಾತೃಗುಪ್ತ) |
| ದಂತುಲ | : | ರಾಜ ಪುರುಷ |
| ಮಾತುಲ | : | ಕವಿಯ ಸೋದರ ಮಾವ |
| ರಂಗಿಣಿ, ಸಂಗಿನಿ | : | ನಗರ ವಾಸಿಗಳು. ಪ್ರಿಯಾಂಗು ಕಡೆಯಿಂದ ಬಂದವರು |
| ಅನುಸ್ವಾರ | : | ಅಧಿಕಾರಿ |
| ಅನುನಾಸಿಕ | : | ಅಧಿಕಾರಿ |
| ಪ್ರಿಯಂಗು ಮಂಜರಿ | : | ರಾಜಕನ್ಯೆ, ಕವಿ ಪತ್ನಿ |

# ಮೊದಲನೆ ಅಂಕ

[ಪರದೆ ಎಳೆಯುವ ಮೊದಲು ಕೇಳಿಬರುತ್ತಿರುವ ಮೇಘಗರ್ಜನೆ ಮತ್ತು ಮಳೆ ಬೀಳುವ ಶಬ್ದ. ಪರದೆ ಎದ್ದ ಮೇಲೂ ಸ್ವಲ್ಪ ಹೊತ್ತು ಕೇಳಿಬರುವುದು. ನಂತರ ಕ್ರಮೇಣ ಕಡಿಮೆಯಾಗುತ್ತ ಕರಗಿ ಹೋಗುತ್ತದೆ.]

[ಸಾಧಾರಣವಾದ ಒಂದು ಕೋಣೆ, ಗೋಡೆಗಳು ಮಣ್ಣಿನಿಂದ ಮಾಡಲ್ಪಟ್ಟಿದೆ. ಅವುಗಳ ಕೆಳಭಾಗವು ಮಣ್ಣಿನಿಂದ ಲೇಪಿತವಾಗಿದೆ. ಮುಂಗಡೆಯ ಬಾಗಿಲು ಕತ್ತಲಿಂದ ತುಂಬಿದ ಕೊಠಡಿಯೊಳಕ್ಕೆ ತೆರದಿದೆ. ಅದರ ಎರಡೂ ಕಡೆಗಳಲ್ಲಿ ಪುಟ್ಟ ದೀಪಾಧಾರಗಳು ಗೋಡೆಗೆ ಹೊಂದಿಕೊಂಡಂತಿದೆ. ಅವುಗಳಲ್ಲಿ ಹೊತ್ತಿಸದ ದೀಪಗಳಿವೆ. ಎಡಗಡೆಯ ಬಾಗಿಲು ಮತ್ತೊಂದು ಬಾಗಿಲು ತೆಗೆಯಲು, ಆ ಕೋಣೆಯೊಳಕ್ಕೆ ತೆರೆದುಕೊಳ್ಳುತ್ತದೆ. ಕೋಣೆಯಲ್ಲಿ ಹಾಸಿರುವ ಹಾಸಿಗೆಯ ತುದಿ ಮಾತ್ರ ಕಾಣಬರುತ್ತದೆ. ಬಾಗಿಲಿನ ಕಿಟಕಿಗಳು ಮಣ್ಣಿನಿಂದ ಲೇಪಿತವಾಗಿದೆ. ಅದರ ಮೇಲೆ ಕೇಸರಿ ಮತ್ತು ಹಳದಿ ಬಣ್ಣದಲ್ಲಿ ಶಂಖ ಮತ್ತು ಕಮಲದ ಚಿತ್ರಗಳನ್ನು ಬಿಡಿಸಲಾಗಿದೆ. ಬಲಗಡೆ ದೊಡ್ಡದೊಂದು ಕಿಟಕಿ. ಆ ಕಿಟಕಿಯ ಮೂಲಕವಾಗಿ ಆಗಾಗ ಮಿಂಚುವ ಮಿಂಚಿನ ಬೆಳಕು ಕಾಣುತ್ತದೆ.

ಕೊಠಡಿಯಲ್ಲಿ ಒಂದು ಕಡೆ ಒಲೆ ಇದೆ. ಅದರ ಹತ್ತಿರದಲ್ಲಿ ಕಂಚಿನ ಪಾತ್ರೆಗಳನ್ನು ಜೋಡಿಸಿಲಾಗಿದೆ. ಮತ್ತೊಂದು ಕಡೆ ಕಿಟಕಿಯಿಂದ ಸ್ವಲ್ಪ ದೂರದಲ್ಲಿ 3,4 ದೊಡ್ಡ ದೊಡ್ಡ ಕೊಡಗಳು ಕಾಣುತ್ತಿವೆ. ಅವುಗಳ ಮೇಲೆ ಮಸಿ ಮತ್ತು ಕೊಳಕು. ಅವುಗಳನ್ನು ಹುಲ್ಲಿನಿಂದ ಮುಚ್ಚಿ ಮೇಲೆ ಕಲ್ಲುಗಳನ್ನು ಇಡಲಾಗಿದೆ. ಕಿಟಕಿಗೆ ಹೊಂದಿಕೊಂಡಂತೆ ಒಂದು ಮಣೆ. ಅದರ ಮೇಲೆ ಹುಲಿ ಚರ್ಮ ಹಾಸಿದೆ. ಒಲೆಯ ಬಳಿ ಒಂದೆರಡು ಪೀಠಗಳಿವೆ (ಮಣೆ). ಒಂದರ ಮೇಲೆ ಅಂಬಿಕೆ ಕುಳಿತು ದೂರದಲ್ಲಿ ಕುಟ್ಟಿದ ಬತ್ತವನ್ನು ಕೇರುತ್ತಿರುವಳು ಒಮ್ಮೆ ಕಿಟಕಿಯ ಕಡೆ ನೋಡಿ ನಿಟ್ಟುಸಿರಿಟ್ಟು ಮತ್ತೆ ಮಗ್ನಳಾಗುವಳು.

ಮುಂದಿನ ಬಾಗಿಲು ತೆರೆದುಕೊಂಡು ಮಳೆಯಲ್ಲಿ ತೊಯ್ದ ಮಲ್ಲಿಕಾ ನಡುಗುತ್ತಾ ಒಳಗೆ ಬರುವಳು. ಕ್ಷಣಕಾಲ ನಿಂತು ಮತ್ತೆ ಅಂಬಿಕೆಯ ಬಳಿ ಹೋಗುವಳು.]

ಮಲ್ಲಿಕಾ :- ಆಷಾಢದ ಮೊದಲ ದಿನ! ಎಂಥ ಜಡಿ ಮಳೆ? ಎಂಥಾ ಮಳೆ ಅಮ್ಮ! ಎಂಥಾ ಜಡಿ ಮಳೆ! ಕಣಿವೆಯಿಂದಾಚೆ ಬದಿ! ಎಲ್ಲಾ ಕಡೆ ತೊಯ್ದು ಬಿದ್ದಿವೆ. ನೋಡಮ್ಮ ಎಷ್ಟು ತೊಯ್ದಿದ್ದೇನೆ. [ಅಂಬಿಕೆ ಅವಳನ್ನು ಅಡಿಯಿಂದ ಮುಡಿಯವರೆಗೆ ನೋಡಿ ಮತ್ತೆ ಕೆಲಸಕ್ಕೆ ತೊಡಗುವಳು ಮಲ್ಲಿಕಾ ಮೊಳ ಕಾಲೂರಿ ಕುಳಿತು ತಾಯ ಭುಜಕ್ಕೆ ತನ್ನ ತಲೆಯನ್ನು ಆನಿಸುವಳು]

ದಕ್ಷಿಣದ ಕಡೆಯಿಂದ ಹಾರಿಬಂದ ಪಂಕ್ತಿಯನ್ನೂ ನೋಡಿದ್ದೇನೆ.... ನೋಡಮ್ಮ ನಾನೆಷ್ಟು ತೊಯ್ದಿದ್ದೇನೆ. [ತಾಯ ಕೊರಲಿಗೆ ತುಟಿಯಿಟ್ಟು ಎದ್ದು ನಿಲ್ಲುತ್ತ ಚಳಿಯಿಂದ ನಡುಗುವಳು] ಒಣಗಿದ ಬಟ್ಟೆ ಎಲ್ಲಿದೆಯಮ್ಮ. ಹೀಗೇ ನಿಂತಿದ್ದರೆ ನೆಗಡಿ ಹಿಡಿಯುತ್ತೆ...... ಯಾಕಮ್ಮ ಮಾತೇ ಆಡಲ್ಲ.

[ಅಂಬಿಕೆ ಆಕ್ರೋಶದಿಂದ ಅವಳನ್ನು ನೋಡುವಳು]

ಅಂಬಿಕೆ :- ಒಣಗಿದ ಬಟ್ಟೆ ಒಳಗೆ ಹಾಸಿಗೆ ಮೇಲಿದೆ.

ಮಲ್ಲಿಕಾ :- ನೀನು ಮೊದಲೇ ತೆಗೆದಿಟ್ಟಿದ್ಯೇನು? (ಒಳಗೆ ಹೋಗುವಳು) ನಾನು ತೊಯ್ದು ಬರ್ತೀನೀಂತ ನಿಂಗೆ ಗೊತ್ತಿತ್ತಾ? .......ನಂಗೊತ್ತು. ಬಹಳ ಹಚ್ಕೊಳ್ತೀಂತ..... ಆದರೆ ಅಮ್ಮ [ಬಾಗಿಲಿಂದ ತಿರುಗಿ ಅಂಬಿಕೆಯ ಕಡೆ ನೋಡುತ್ತಾಳೆ] ನಾನು ತೊಯ್ದದ್ದಕ್ಕೆ ನನಗೆ ಚಿಂತೆ ಇಲ್ಲಾ. ಈ ದಿನ ನಾನು ತೊಯ್ದೇ ಇರದಿದ್ದರೆ ಖಂಡಿತ ಮೋಸವಾಗುತ್ತಿತ್ತು. [ಬಾಗಿಲಿಗೆ ಒರಗಿ ಕೊಳ್ಳುತ್ತಾ] ನಾಲ್ಕಾರು ಕಡೆ ಮಸುಕು ಮಸುಕಾದ ಮೋಡಗಳು ತುಂಬಿ ಹರಡಿದ್ದುವು. ಮಳೆ ಬರುತ್ತೇಂತ ತಿಳಿದಿತ್ತು. ಆದರೂ ಘಟ್ಟದ ದಾರಿಯಿಂದಲೆ ಕೆಳಕ್ಕೆ ಇಳೀತಾ ನಡೆದಿದ್ದೆ. ನಂತರವೇ ಮಳೆ ಹನಿಸ ತೊಡಗಿತು [ಆಕಸ್ಮಿಕವಾಗಿ ಇಬ್ಬರ ಕಣ್ಣುಗಳು ಒಂದಾಗುವುವು] ಬಟ್ಟೆ ಬದಲಾಯಿಸ್ಕೊಂಡು ಬಂದೆ ನಿಂಗೆ ಎಲ್ಲಾ ಹೇಳ್ತೀನಿ. ತುಂಬ ಒಳ್ಳೇ ಅನುಭವ. ಖಂಡಿತ ಅದ್ಭುತವಾದ ಅನುಭವವಾಗಿತ್ತು. [ಒಳಗೆ ಹೋಗುವಳು] [ಅಂಬಿಕೆ ಎದ್ದು ಕುಟ್ಟಿದ ಬತ್ತವನ್ನು ಒಂದು ಮಡಕೆಯಲ್ಲಿ ತುಂಬಿ ಮತ್ತೊಂದು ಮಡಕೆಯಿಂದ ಹೊಸ ಭತ್ತವನ್ನು ತೆಗೆದುಕೊಂಡು ಬರುತ್ತಾಳೆ.]

[ಒಳಗಿನ ಕೋಣೆಯಿಂದ ಮಲ್ಲಿಕಾಳ ಮಾತುಗಳು ಕೇಳಿಬರುತ್ತದೆ. ಮಧ್ಯೆ ಮಧ್ಯೆ ಅವಳಾಕೃತಿಯು ಕಂಡು ಮರೆಯಾಗುತ್ತದೆ]

ನೀಲ ಕಮಲದಂತೆ ಕೋಮಲ, ಆರ್ದ್ರವಾಯುವಿನಂತೆ ಹಗುರ ಮತ್ತು ಸ್ವಪ್ನದಂತೆ ಚಿತ್ರಮಯ....... ಅವುಗಳನ್ನೆಲ್ಲಾ ನನ್ನಲ್ಲಿ ತುಂಬಿಕೊಂಡು ಕಣ್ಣು ಮುಚ್ಚಿಕೊಳ್ಳಬೇಕೆಂದಿದ್ದೆ.... ಓ..... ನನ್ನ ಶರೀರವೆಲ್ಲಾ ಹಿಂಡಿದಂತಾಗುತ್ತಿದೆಯಮ್ಮ. ಎಷ್ಟೊಂದು ನೀರು ಹೀರಿವೆ ನನ್ನ ಬಟ್ಟೆಗಳು. ಓಹ್....... ಶೀತ ಕಡಿತದ ಉಷ್ಣತೆಯ ಹಿತ ಸ್ಪರ್ಶ.....

(ತನಗೆ ತಾನೇ ಹೇಳಿ ಕೊಳ್ಳುತ್ತಾಳೆ)

ಕುವಲಯದಲ ನೀಲೆರುನ್ನತೈ ಸ್ತೋಯಂ ನಂಮೈಃ...

**ಮಲ್ಲಿಕಾ :** ಒದ್ದೆ ಬಟ್ಟೆಗಳನ್ನು ಎಲ್ಲಿ ಹಾಕಲಮ್ಮ ಇಲ್ಲೇ ಇರ್ಲೆನು

"ಮೃದು ಪವನ ವಿಧೂರ್ಣೈರ್ಮಂದ ಮಂದಂ ಚಲದ್ಭಿ.........

ಅಪಹೃತಮಿವ ಚೇತ ಸ್ತೋಯ ದೈಃ ಸೇಂದ್ರ ಚಾಪೈ.......

ಪದಿಕ ಜಿನ ವಧೂನಾಂ ತದ್ವಿಯೋಗಾಕುಲಾನಾಮ್!

(ಹೊರಗೆ ಬರುತ್ತಾಳೆ)

ಅಮ್ಮಾ ಈ ದಿನದ ಈ ಸುಖ ಕ್ಷಣಗಳನ್ನು ಎಂದಿಗೂ ಮರೆಯಲಾರೆ. ಚೆಲುವಿನ ಸಾಕ್ಷಾತ್ಕಾರ ಹಿಂದೆಂದೂ ನನಗಾಗಿರಲಿಲ್ಲ ಸೌಂದರ್ಯ ಅಸ್ಪೃಶ್ಯವೆನಿಸಿದ್ದರೂ ಇಂದು ರಕ್ತ ಮಾಂಸಗಳಿಂದ ತುಂಬಿದ ಜೀವಂತ ವಸ್ತುವಾಗಿತ್ತು. ಅದನ್ನು ಈ ದಿನ ಸ್ಪರ್ಶಿಸಿ ನೋಡಿ, ಅದರ ಸವಿಯನ್ನು ಸವಿಯಬಲ್ಲವಳಾಗಿದ್ದೆ. ಆಗಲೇ ನನಗೆ ಭಾವನೆ ಹೇಗೆ ಕಾವ್ಯರೂಪ ತಾಳುತ್ತೇನ್ನೋದು ತಿಳೀತು. ಪರ್ವತ ಶಿಖರಗಳಿಂದ ಹಾದು ಹೋಗುವ ಮೇಘ ಮಾಲೆಯಲ್ಲಿ ಕೆಲವರೇಕೆ ಮೈ ಮರೆಯುತ್ತಾರೆ ಎಂಬುದು ಮತ್ತೆ ಕೆಲವರು ನೀಲನಭದಲ್ಲಿ ಮೂಡಿ ಮರೆಯಾಗುವ ಚಿತ್ರ ವಿಚಿತ್ರಗಳಲ್ಲಿ ತಮ್ಮನ್ನು ತಾವೇ ಮರೆತು ಮುಗ್ಧರಾಗುತ್ತಾರೇನ್ನೋದೂ ಇಂದು ನನ್ನ ಜೀವನದಲ್ಲಿ ಅರಿಯೋಕೆ ಸಾಧ್ಯವಾಯಿತು..... ಯಾಕಮ್ಮಾ ಹೀಗೆ ಸುಮ್ಮನಿದ್ದೀಯಾ?

**ಅಂಬಿಕೆ** :- ನೋಡ್ತಿದ್ದಿ ನಾನು ಕೆಲ್ಸ ಮಾಡ್ತಿರೋದು.

**ಮಲ್ಲಿಕಾ** :- ಕೆಲ್ಸ ಯಾವಾಗ್ಲೂ ಮಾಡ್ತಿ, ಆದರೆ ಹೀಗೆ ಯಾವಾಗ್ಲೂ ಸುಮ್ಮನೆ ಇರೋದಿಲ್ಲ.

[ಅಂಬಿಕೆಯ ಬಳಿ ಬಂದು ಕೂರುತ್ತಾಳೆ. ಅಂಬಿಕೆ ಸುಮ್ಮನೆ ಭತ್ತ ಕುಟ್ಟುತ್ತಿರುತ್ತಾಳೆ. ಮಲ್ಲಿಕಾ ಅವಳ ಕೈಯಿಂದ ಅದನ್ನು ಕಿತ್ತು ಕೊಳ್ಳುತ್ತಾ] ಕೆಲ್ಸ ಮಾಡೋಕೆ ಬಿಡೋಲ್ಲ

ನಿನ್ನ..... ನನ್ಹತ್ರ ಮಾತಾಡಮ್ಮ......

ಅಂಬಿಕೆ :- ಏನಂತ ಮಾತಾಡ್ಲಿ?

ಮಲ್ಲಿಕಾ :- ಏನಾದ್ರೂ ಸರಿ. ಯಾಕೆ ತೊಯ್ದು ಬಂದೇಂತ ಬಯ್ಯಿ. ಇಲ್ಲಾ ಹೇಳು. ನಿನಗೆ ಆಯಾಸವಾಗಿದ್ದರೆ ನಾನು ಕೇರುತ್ತೇನೆ. ಇಲ್ಲಾ "ನಾನು ಮನೆಯಲ್ಲಿ ಒಬ್ಬಳೆ ಇದ್ದೆ ಬೇಸರವಾಗುತ್ತಿತ್ತು" ಅಂತಾ ಹೇಳು.

ಅಂಬಿಕೆ :- ನನಗೆಲ್ಲಾ ಸರಿಹೋಗುತ್ತೆ [ಮೊರವನ್ನು ಅವಳಿಂದ ತೆಗೆದುಕೊಂಡು ಬಿಡುವಳು] ಯಾವಾಗ್ತಾನೆ ನಾವಿಬ್ಬರೂ ಜೊತೆಯಾಗಿರ್ತೇವೆ. ನೀನಿಲ್ಲಿದ್ದರೂ ನಾನು ಒಂಟಿಯಾಗಿ ಇರೊಲ್ವೆ!

ಮಲ್ಲಿಕಾ :- ನೀನು ಕೆಲ್ಸ ಮಾಡೋಕೆ ಬಿಡಲ್ಲ. [ಮತ್ತೆ ಮೊರವನ್ನು ಅವಳಿಂದ ತೆಗೆದುಕೊಂಡು ಕೊಡಗಳ ಬಳಿ ಇಟ್ಟು ಬಿಡುತ್ತಾಳೆ.] ನಾನು ಮನೆಯಲ್ಲಿದ್ದರೂ, ನೀನು ಒಬ್ಬಳೇ ಇರುತ್ತೀ? ನಾನು ಮನೆಯಲ್ಲಿದ್ದರೆ ನಿನ್ನ ಕೆಲ್ಸಕ್ಕೆ ನಾನು ತೊಂದರೆ ಮಾಡ್ತೀನಿ ಅಂತ ಆಗಾಗ ಹೇಳ್ತಿ ಮತ್ತೊಮ್ಮೆ ಹೇಳ್ತಿ....
[ಹಿಂದಿನಿಂದ ಬಂದು ಕೊರಳಿಗೆ ತೆಕ್ಕೆ ಬೀಳುತ್ತಾಳೆ] ನನಗ್ಹೇಳು ನೀನ್ಯಾಕೆ ಇಷ್ಟೊಂದು ಗಂಭೀರವಾಗಿರ್ತಿ?

ಅಂಬಿಕೆ :- ಹಾಲ್ಕಾಯಿಸಿಟ್ಟಿದ್ದೇನೆ ಸಕ್ರೆ ಹಾಕಿ ಕುಡಿದು ಬಿಡು.

ಮಲ್ಲಿಕಾ :- ಇಲ್ಲಾ ನೀನು ಮೊದ್ಲು ಹೇಳು.

ಅಂಬಿಕೆ :- ಸ್ವಲ್ಪ ಹೊತ್ತು ಹಾಸಿಗೆ ಮೇಲೆ ಮಲಕ್ಕೊಂಡು ಸುಧಾರಿಸಿಕೋ. ನನಗಿನ್ನೂ.....

ಮಲ್ಲಿಕಾ :- ಇಲ್ಲಾಮ್ಮ ನನಗೆ ಮಲಕ್ಕೊಳ್ಬೇಕಾಗಿಲ್ಲ. ನನಗೆ ಆಯಾಸವಾದರೂ ಎಲ್ಲಾಗಿದೆ? ಈಗ್ಲೂ ಮಳೆ ಹನಿಗಳಿಂದಾದ ಪುಲಕದ ಅನುಭವವು ಆಗುತ್ತಿದೆ. ಈಗಲೂ ನನ್ನ ಕೂದಲು ತೊಟ್ಟಿಡುತ್ತಿದೆ... ನೀನ್ಯಾಕೆ ಮಾತಾಡೊಲ್ಲ? ಹೀಗೆ ಮಾಡೋದಾದ್ರೆ ನಾನು ನಿನ್ಹತ್ರ ಮಾತಾಡೊಲ್ಲ.
[ಅಂಬಿಕೆ ಏನನ್ನೂ ನುಡಿಯದೆ ಕಣ್ಣೊರಸಿಕೊಳ್ಳುತ್ತಾಳೆ. ಅವಳನ್ನು ಸರಿಸಿ ತಾನು ಪಕ್ಕದಲ್ಲಿ ಕೂಡುತ್ತಾಳೆ. ಮಲ್ಲಿಕಾ ಒಂದು ಕ್ಷಣ ಮೌನದಿಂದ ಅವಳ ಕಡೆ ನೋಡುತ್ತಾಳೆ]
ಏನಾಗಿದೆಯಮ್ಮಾ? ನೀನ್ಯಾಕೆ ಅಳ್ತಿದ್ದೀಯ?.

ಅಂಬಿಕೆ :- ಏನೂ ಇಲ್ಲಾ ಮಲ್ಲಿಕಾ. ಕೂತು ಕೂತು ಮನಸ್ಸಿಗೆ ಸ್ವಲ್ಪ ಬೇಜಾರಾಗಿದೆ.

ಮಲ್ಲಿಕಾ :- ಕೂತು ಕೂತು ಬೇಜಾರಾಗುತ್ತೆ. ಆದರೆ ಅಳು ಬರೊಲ್ಲ. ಅಮ್ಮಾ.....

ನನಗೆ ಹೇಳದಿದ್ದರೆ ನನ್ನಾಣೆ [ದೂರದಲ್ಲಿ ಕೋಲಾಹಲ. ಕುದುರೆಗಳ ಖುರ ಪುಟ ಧ್ವನಿ ಕೇಳಿ ಬರುತ್ತೆ. ಅಂಬಿಕೆ ಎದ್ದು ಕಿಟಕಿಯ ಬಳಿ ಹೋಗುವಳು. ಸ್ವಲ್ಪ ಹೊತ್ತಿನ ನಂತರ ಮಲ್ಲಿಕಾನೂ ಎದ್ದು ಕಿಟಕಿಯ ಬಳಿ ಹೋಗುವಳು. ಗೊರಸಿನ ಶಬ್ಧ ಹತ್ತಿರ ಬಂದಂತಾಗಿ ಮತ್ತೆ ದೂರದಲ್ಲಿ ಲೀನವಾಗುತ್ತದೆ.]

**ಮಲ್ಲಿಕಾ** :- ಇವರು ಯಾರಮ್ಮಾ?

**ಅಂಬಿಕೆ** :- ರಾಜ್ಯಾಧಿಕಾರಿಗಳಿರಬಹುದು.

**ಮಲ್ಲಿಕಾ** :- ಇಲ್ಲಿ ಇವರೇನ್ಮಾಡ್ತಿದಾರೆ?

**ಅಂಬಿಕೆ** :- ಯಾರಿಗ್ಗೊತ್ತು ಏನ್ಮಾಡ್ತೀದ್ದಾರೋ? ಯಾವಾಗ್ಲೋ ಏನೋ ಒಮ್ಮೆ ಇವರು ಕಾಣಿಸಿಕೊಳ್ತಾರೆ. ಆದರೆ ಇವರು ಕಂಡು ಬಂದಾಗ ಏನಾದರೊಂದು ಅನಾಹುತ ಆಗ್ಹೋಗುತ್ತೆ. ಕೆಲವು ಸಾರಿ ಯುದ್ಧದ ಸೂಚನೆ ಕಂಡು ಬಂದು ಮತ್ತೆ ಕೆಲವು ವೇಳೆ ಮಹಾಮಾರಿ ಕಾಣಿಸಿಕೊಳ್ಳುತ್ತಾಳೆ. [ನಿಟ್ಟುಸಿರು ಇಡುವಳು] ಹಿಂದೊಮ್ಮೆ ಮಹಾಮಾರಿಗೆ ಬಲಿಯಾಗಿ ನಿಮ್ಮಪ್ಪ ತೀರಿಕೊಂಡಾಗ ಇವರ್ನ ಇಲ್ಲಿ ನೋಡಿದೆ [ಮುಡಿಯಿಂದ ಅಡಿಯವರೆಗೆ ನಡುಗುತ್ತಾಳೆ]

**ಮಲ್ಲಿಕಾ** :- ಆದರೆ ಇಂದೇಕೆ ಇವರು ಇಲ್ಲಿ ಬಂದಿದ್ದಾರೆ.

**ಅಂಬಿಕೆ** :- ಯಾಕೋ ಗೊತ್ತಿಲ್ಲ [ಅಂಬಿಕೆ ಮತ್ತೆ ಮೊರವನ್ನು ತೆಗೆದು ಕೊಳ್ಳಲು ಹೋಗುತ್ತಾಳೆ. ಮಲ್ಲಿಕಾ ಅವಳನ್ನು ತಡೆಯುತ್ತಾಳೆ]

**ಮಲ್ಲಿಕಾ** :- ನೀನಂತೂ ಹೇಳ್ಲೇ ಇಲ್ಲಮ್ಮಾ [ಅಂಬಿಕೆ ಕ್ಷಣ ಕಾಲ ನೆಟ್ಟದೃಷ್ಟಿಯಿಂದ ನೋಡುತ್ತಿರುತ್ತಾಳೆ. ಮತ್ತೆ ಕೆಳಗೆ ನೋಡುತ್ತಾಳೆ]

**ಅಂಬಿಕೆ** :- ಅಗ್ನಿ ಮಿತ್ರ ಹಿಂತಿರುಗಿ ಬಂದಿದ್ದಾನೆ. [ಮೊರವನ್ನು ಎತ್ತಿಕೊಂಡು ತನ್ನ ಜಾಗಕ್ಕೆ ಹೋಗುವಳು. ಮಲ್ಲಿಕಾ ಅಲ್ಲಿಯೇ ನಿಂತಿರುವಳು]

**ಮಲ್ಲಿಕಾ** :- ಹಿಂತಿರುಗಿ ಬಂದಿದ್ದಾನೆ? ಎಲ್ಲಿಂದ?

**ಅಂಬಿಕೆ** :- ನಾನು ಎಲ್ಲಿಗೆ ಕಳಿಸಿದ್ದೆನೋ ಅಲ್ಲಿಂದ.

**ಮಲ್ಲಿಕಾ** :- ನೀನು ಕಳಿಸಿದ್ದೀಯಾ? [ತುಟಿ ಕಂಪಿಸುವುದು, ನಿಧಾನವಾಗಿ ನಡೆದು ಅಂಬಿಕೆ ಹತ್ತಿರ ಬರುತ್ತಾಳೆ] ಆದ್ರೆ ನಿನಗೆ ನಾನು ಹೇಳಿದೆ ಅಗ್ನಿ ಮಿತ್ರನನ್ನ ಎಲ್ಲಿಗೂ ಕಳಿಸ ಬೇಕಾಗಿಲ್ಲ ಅಂತಾ. [ಕ್ರಮೇಣ ಉತ್ತೇಜಿತಳಾಗಿ] ನಿನಗ್ಗೊತ್ತು ನಾನು ಮದುವೆಯಾಗೊಲ್ಲ ಅಂತಾ ಮತ್ತೆ ಅದಕ್ಯಾಕೆ ನೀನು ಇಷ್ಟು ಪ್ರಯತ್ನ ಪಡುತ್ತೀ. ನಿನಗೆ ನಂದು ವ್ಯರ್ಥ ಪ್ರಲಾಪ ಅಂತ ಅನ್ನಿಸಬಹುದೇನೋ?

[ಅಂಬಿಕೆ ಭತ್ತವನ್ನು ಹಿಡಿದೆತ್ತಿಕೊಂಡು ಉಜ್ಜುತ್ತಾ ಮೊರದಲ್ಲಿ ಹಾಕುತ್ತಾಳೆ.]

ಅಂಬಿಕೆ :- ನಿನ್ನ ಹಟವೇ ಗೆಲ್ಲುವ ಹಾಗಿದೆ. ಅಗ್ನಿಮಿತ್ರನೂ! ಅವ್ರು ಈ ನಂಟತನಕ್ಕೆ ಒಪ್ಪಲಿಲ್ಲಾನ್ನೋ ಸಮಾಚಾರಾನೇ ತಂದಿದ್ದಾನೆ. ಅವ್ರು ಅಂತಾರೆ....

ಮಲ್ಲಿಕಾ :- ಏನಂತಾರೆ? ಏನಾದ್ರೂ ಅನ್ನೋಕೆ ಅವರಿಗೇನು ಅಧಿಕಾರ ಇದೆ? ಮಲ್ಲಿಕಾ ಬದುಕು ಅವಳ ಸ್ವಂತದ್ದು. ಅದನ್ನು ಹಾಳು ಮಾಡಬೇಕೆಂದು ಯಾರು ಇಷ್ಟ ಪಟ್ರೂ ಅದರಲ್ಲಿ ತಲೆ ಹಾಕಲಿಕ್ಕೆ ಅವರಿಗೆ ಏನಧಿಕಾರವಿದೆ?

ಅಂಬಿಕೆ :- ನನಗಿದೇಂತ ನಾನೆಂದು ಹೇಳಿದ್ದೇನೆ?

[ಮಲ್ಲಿಕಾ ತನ್ನ ಆವೇಶವನ್ನು ಹತ್ತಿಕ್ಕಲು ಪ್ರಯತ್ನಿಸುತ್ತಾಳೆ]

ಮಲ್ಲಿಕಾ :- ಯಾಕೆ ಹಾಗಂತಿ? ನನ್ನನ್ನು ತಿಳಿದು ಕೊಳ್ಳೊಕೆ ಪ್ರಯತ್ನ ಮಾಡೊಲ್ಲೇಕೆ?

[ಅಂಬಿಕೆ ತನ್ನ ಭುಜದ ಮೇಲಿದ್ದ ಅವಳ ಕೈಯನ್ನು ಸರಿಸುತ್ತಾಳೆ.]

ಅಂಬಿಕೆ :- ನಿನ್ನ ಮೇಲೆ ನನಗಧಿಕಾರ ಇಲ್ಲಾ ಅನ್ನೋದು ನನಗ್ಗೊತ್ತು. ಆದರೆ ಇಷ್ಟು ದೊಡ್ಡ ಅಪವಾದ ಮಾತ್ರ ಸಹಿಸೋಕೆ ಆಗೊಲ್ಲ.

[ಮಲ್ಲಿಕಾ ಮೊಣಕಾಲ ಮೇಲೆ ಕೈಯೂರಿ ತಲೆ ಇಡುತ್ತಾಳೆ]

ಮಲ್ಲಿಕಾ :- ಜನರು ಇಲ್ಲ ಸಲ್ಲದ ಅಪವಾದ ಹೊರಸ್ತಾರಂತ ನಂಗೊತ್ತಮ್ಮಾ. ನಿನ್ನ ದುಃಖ ಏನನ್ನೋದು ಗೊತ್ತು. ಆದರೆ ನನಗಿದು ತಪ್ಪು ಕೆಲ್ಸ ಅಂತ ಕಾಣೊಲ್ಲ. ನನ್ನದು ಭಾವನಾತ್ಮಕ ಸಂಬಂಧ. ನಾನು ಕೇವಲ ಭಾವನೆಯಿಂದಲೇ ಹೃದಯದಾಳದ ಭಾವನೆಗಳನ್ನು ವರಿಸಿದ್ದೇನೆ. ಈ ಸಂಬಂಧ, ನಂಟುತನ, ಎಲ್ಲಾ ಸಂಬಂಧಕ್ಕಿಂತಲೂ ಹೆಚ್ಚಿನ್ದು. ನನ್ನ ಹೃದಯದಲ್ಲಿನ ಕೋಮಲ ಪವಿತ್ರ, ಚಿರಭಾವನೆಯನ್ನೇ ಪ್ರೀತಿಸುತ್ತೇನೆ.

[ಅಂಬಿಕೆ ಮುಖ ಗಂಟಿಕ್ಕುವಳು]

ಅಂಬಿಕೆ :- ಇಂಥ ಭಾವನೆ ನನಗೆ ಅಸಹ್ಯ! ಪವಿತ್ರ! ಕೋಮಲ!! ಚಿರ!! ಹುಂ!

ಮಲ್ಲಿಕಾ :- ಅಮ್ಮಾ ನನ್ಯಾಕೆ ನಂಬೋದಿಲ್ಲ.

ಅಂಬಿಕೆ :- ನೀನು ಯಾವುದನ್ನ ಭಾವನೇಂತ ಕರೀತೀಯೋ, ಅದು ಮೋಸ! ಆತ್ಮವಂಚನೆ!! ಭಾವನಾತ್ಮಕ ಸಂಬಂಧದಿಂದ ಭಾವನೆಯನ್ನು ವರಿಸಿದ್ದೀಯ ಇದರ ಅರ್ಥ್ವಾದ್ರೂ ಏನೂಂತ ನಾ ಕೇಳ್ತೇನೆ. ಅದರಿಂದ ನಿನ್ನ ಜೀವನದ ಕೊರತೆಗಳು ತುಂಬುತ್ತವೊ? ಹುಂ! ಭಾವನೆಯಿಂದ ಭಾವನೆಯನ್ನು ವರಿಸಿದ್ದೀಯ?

[ಮಲ್ಲಿಕಾ ಕತ್ತೆತ್ತಿ ಭಾವಣಿಯ ಕಡೆಗೆ ನೋಡುವಳು]

ಮಲ್ಲಿಕಾ :- ಬದುಕಿನಲ್ಲಿ ಸ್ಥೂಲ ಅವಶ್ಯಕತೆಗಳಷ್ಟೇ ಮುಖ್ಯವಲ್ಲ. ಇನ್ನೂ ಸಾಕಷ್ಟು ಇವೆ.

[ಅಂಬಿಕೆ ಭತ್ತ ಕೇರುತ್ತಾಳೆ]

ಅಂಬಿಕೆ :- ಇರಬಹುದು. ಆದರೆ ನನಗೆ ಗೊತ್ತಿಲ್ಲ.

(ಸ್ವಲ್ಪ ಹೊತ್ತು ಮಲ್ಲಿಕಾ ಅಂಬಿಕಾಳ ಕಡೆ ನೋಡುವಳು)

ಮಲ್ಲಿಕಾ :- ನಿಜ ಹೇಳ ಬೇಕಂದ್ರೆ ಹಳ್ಳಿಯ ಇತರ ಜನರಂತೆ ನೀನೂ ನನ್ನನ್ನು ಸಂದೇಹ ಅಸೂಯೆಗಳಿಂದ ನೋಡ್ತಿ!

ಅಂಬಿಕೆ :- ಅವನ ಬಗ್ಗೆ ನನಗೆ ತಿಳಿದಿರುವಷ್ಟು ಉಳಿದ ಗ್ರಾಮವಾಸಿಗಳಿಗೆ ತಿಳೀದು.

[ಕ್ಷಣಕಾಲ ಇಬ್ಬರೂ ಒಬ್ಬರನ್ನೊಬ್ಬರು ರೆಪ್ಪೆಯಾಡಿಸದೆ ನೋಡುವರು]

ಅವನನ್ನು ಕಂಡರೆ ನನಗೆ ಬೇಸರ!

[ಮಲ್ಲಿಕಾಳ ಮುಖದಲ್ಲಿ ವ್ಯಥೆ, ಆವೇಶ, ಅಸಹಾಯಕತೆಯ ಭಾವನೆಗಳು ಒಟ್ಟಿಗೆ ಮೂಡುತ್ತವೆ]

ಮಲ್ಲಿಕಾ :- ಅಮ್ಮಾ!

ಅಂಬಿಕೆ :- ಬೇರೆಯವರಿಗೆ ಅವನಿಂದೇನು ಪ್ರಯೋಜನ?

ಆದ್ರೆ ನನ್ನ ಮನೆ ಹಾಳಾಗಿರೋದು ಅವನಿಂದ್ಲೇ.

[ಬಾಗಿಲ ಕಡೆಯಿಂದ ಕಾಳಿದಾಸನ ಮಾತು ಕೇಳಿಬರುತ್ತದೆ. ಅಂಬಿಕೆ ಮುಖದಲ್ಲಿನ ಗೆರೆಗಳು ಇನ್ನೂ ಆಳವಾಗುತ್ತವೆ. ಮೊರ ತೆಗೆದು ಕೊಳ್ಳಲು ಎದ್ದು ನಿಲ್ಲುತ್ತಾಳೆ. ಕ್ಷಣ ಕಾಲ ಬಾಗಿಲ ಕಡೆ ನೋಡಿ ಮರುಕ್ಷಣವೇ ಒಳಗೆ ಹೋಗುವಳು]

ಮಲ್ಲಿಕಾ :- ನಿಲ್ಲಮ್ಮಾ ಯಾಕೆ ಹೊರಟು ಬಿಟ್ಟೆ?

ಅಂಬಿಕೆ :- ಅಮ್ಮನ ಜೀವನ ಕೇವಲ ಭಾವನೆಯಿಂದ ನಡೆಯೊಲ್ಲ. ಮನೆಯಲ್ಲಿ ಮಾಡೋದ್ಕೆ ಬೇಕಾದಷ್ಟು ಕೆಲ್ಸವಿದೆ [ಹೋಗುವಳು] [ಜಿಂಕೆ ಮರಿಯೊಂದನ್ನು ಕಂಕುಳಲ್ಲೆತ್ತಿಕೊಂಡು ಮುದ್ದಾಡುತ್ತಾ ಬರುತ್ತಾನೆ. ಅದರ ದೇಹದಿಂದ ರಕ್ತತೊಟ್ಟಿಕುತ್ತಿದೆ.]

ಕಾಳಿ :- ನಾವು ಬದಕ್ತೇವೆ ಅಲ್ವ ಮರಿ? ಒಂದು ಬಾಣ ಘಾಸಿ ಮಾಡಿದ್ರೆ ನಾವು ಸಾಯೋದು ಬೇಡ. ನಮ್ಮ ಶರೀರ ಮೆತ್ತಗಿದ್ರೇನು? ನೋವನ್ನು ನುಂಗೋಕೂ ಬರುತ್ತೆ. ಒಂದು ಬಾಣ ಪ್ರಾಣತೆಗೆಯೋದಾದ್ರೆ, ಬೆರಳುಗಳ ಮೃದು ಸ್ಪರ್ಶ ಪ್ರಾಣದಾನವನ್ನು ಮಾಡುತ್ತೆ. ನಾವು ಮತ್ತೊಮ್ಮೆ ಹುಟ್ತೇವೆ. ಮೆತ್ತನೆಯ ಹಾಸಿನ ಮೇಲೆ ಮಲಗಿ ಸುಧಾರಿಸಿ ಕೊಳ್ಳೋಣ. ಚೆನ್ನಾಗಿ

ಮೈಗೆಲ್ಲಾ ತುಪ್ಪ ಸವರ್ತೇನೆ. ನಾಳೆ ಮತ್ತೆ ನಾವು ಕಾಡಿನಲ್ಲೆಲ್ಲಾ ಅಲೆಯಬಹುದು. ಎಳೆಗರಿಕೆ ತಿನ್ನೋಣಲ್ವ?

[ಮಲ್ಲಿಕಾ ಪ್ರಯತ್ನ ಪೂರ್ವಕವಾಗಿ ಮುಖ ಭಾವವನ್ನು ಬದಲಾಯಿಸಿ ಬಾಗಿಲ ಹತ್ತಿರ ಬರುತ್ತಾಳೆ]

ಮಲ್ಲಿಕಾ :- ಘಾಯಗೊಂಡ ಮರಿ. ಇದನ್ನು ಗಾಯ ಪಡಿಸುವಂತಾವ್ನು ಯಾರಿರ ಬಹುದು ಇಲ್ಲಿ. ಏನು ದಕ್ಷಿಣದಲ್ಲಿನ ಹಾಗೆ, ಇಲ್ಲಿಯೂ.....

ಕಾಳಿ :- ಈ ದಿನ ಗ್ರಾಮದಲ್ಲಿ ಹೊಸಬರು ಕೆಲವರನ್ನ ನೋಡಿದೆ.

[ಕಿಟಕಿಯ ಬಳಿ ಬಂದು ಮಣೆಯ ಮೇಲೆ ಕೂಡುತ್ತಾನೆ ಯಾರೋ ರಾಜಾಧಿಕಾರಿಗಳು ಬಂದ ಹಾಗಿದೆ.]

[ಜಿಂಕೆ ಮರಿಯನ್ನು ಎದೆಗಪ್ಪಿಕೊಂಡು ಪ್ರೀತಿಯಿಂದ ಕಟ್ಟುತ್ತಾನೆ]

ನಾವು ಮಲ್ಗೋಣಲ್ಲ? ಹೌದು. ಮಲಗಿದ್ರೆ ನಮ್ಮ ನೋವು ಸ್ವಲ್ಪ ಕಡಿಮೆಯಾಗುತ್ತೆ. ಆದರೆ ಮೊದಲು ಸ್ವಲ್ಪ ಹಾಲು ಕುಡಿಯೋಣ. ಮಲ್ಲಿಕಾ ಯಾವುದಾದ್ರೂ ಒಂದು ಪಾತ್ರೇಲಿ ಹಾಲು ತೆಗೆದುಕೊಂಡು ಬಾ.

ಮಲ್ಲಿಕಾ :- ಅಮ್ಮ ಹಾಲು ಕಾಯ್ಸಿ ಇಟ್ಟಿರಬೇಕು. ನೋಡ್ತೇನೆ.

[ಒಲೆಯ ಹತ್ತಿರವಿರುವ ಪಾತ್ರೆಗಳ ಬಳಿಗೆ ಹೋಗಿ ನೋಡುತ್ತಾಳೆ]

ಈಗ ತಾನೇ ಒಂದಿಬ್ಬರು ರಾಜಾಧಿಕಾರಿಗಳು ಕುದುರೆಗಳ ಮೇಲೆ ಹೋಗೋದನ್ನ ನೋಡ್ದೆ. ಅಮ್ಮ ಹೇಳ್ತಾಳೆ, ಇವ್ರು ಕಾಣಿಸಿಕೊಂಡಾಗ ಏನಾದ್ರೂ ಕೆಟ್ಟದ್ದಾಗುತ್ತೇಂತ. ಮಳೆ ಪ್ರಾರಂಭದಿಂದುಂಟಾದ ಪುಲಕದ ನಂತರ. ಇದೆಲ್ಲ ಏನೋ ವಿಚಿತ್ರವಾಗಿ ಕಾಣ್ತಿದೆ.

[ಹಾಲಿನ ಪಾತ್ರೆ ಸಿಕ್ಕಿದ ಕೂಡ್ಲೆ ಅದನ್ನು ಬೇರೊಂದು ಪಾತ್ರೆಗೆ ಬಗ್ಗಿಸಿ ಕೋಡ್ತಾಳೆ]

ಅಮ್ಮನಿಗೆ, ನನ್ನ ಮೇಲೆ ತುಂಬಾ ಕೋಪ ಬಂದಿದೆ.

[ಕಾಳಿದಾಸ ಜಿಂಕೆಯ ಮರಿಯನ್ನು ತೋಳ ತೆಕ್ಕೆಯಲ್ಲಿಟ್ಟು ಕೂಗುತ್ತಾನೆ.]

ಕಾಳಿ :- ಈಗ ಸ್ವಲ್ಪ ಆರಾಮವಾಗಿದೆಯಲ್ವಾ? ನೋವು ಕಡಿಮೆಯಾಗಿ ಸುಧಾರಿಸಿಕೊಳ್ತಿದ್ದೇವೆ. ಅಬ್ಬ, ಅರಳೆಯಂತ ಮೃದು ದೇಹಕ್ಕೆ ಬಾಣ ಬಿಡಲು ಹೇಗಾದ್ರೂ ಮನಸ್ಸು ಬಂತೊ, ತಿಳೀದು. ನೆಗೆಯುತ್ತಾ ಇದು ನನ್ನ ಮಡ್ಲಿಗೆ ಬಂತು. ನಾನು ಅದ್ನ 'ನಿನ್ನ ತಾಯಿಗಿರುವ ದಯಾರ್ದ್ರ ಕಣ್ಣುಗಳುಳ್ಳ ಸ್ನೇಹ ಸಿಕ್ಕುವ ಒಬ್ಬರಲ್ಲಿಗೆ ಕರೆದೊಯ್ಯುತ್ತೇನೆಂದು' ಹೇಳಿತಂದೆ.

[ಸ್ನೇಹ ದೃಷ್ಟಿಯಿಂದ ಮಲ್ಲಿಕಾಳ ಕಡೆ ನೋಡುತ್ತಾನೆ. ಮಲ್ಲಿಕಾ ಹಾಲಿನ ಪಾತ್ರೆ ಹಿಡಿದುಕೊಂಡು ಅವನ ಬಳಿ ಬರುತ್ತಾಳೆ.]

**ಮಲ್ಲಿಕಾ** :- ಅಮ್ಮನಿಗೆ ನಿಜವಾಗ್ಲೂ ತುಂಬಾ ಸಿಟ್ಟು ಬಂದಿದೆ. ಈ ದಿನ ಮಳೆ ಬರೋವಾಗ ನಿಂಜೊತೆಗೆ ಇದ್ದು ತೊಯ್ದು ಬಂದಿದ್ದೀನೀಂತ ಅನುಮಾನ. ಅಮ್ಮನಿಗೆ ನಿಂದೇ ಒಂದು ಯೋಚ್ನೆ

**ಕಾಳಿ** :- ಹಾಲ್ನ ಇಲ್ಲಿ ಕೊಡು. ಇದನ್ನು ನೀನು ಎತ್ಕೊ.

[ಹಾಲಿನ ಪಾತ್ರೆಯನ್ನು ಕಾಳಿದಾಸ ಕೈಗೆ ತೆಗೆದುಕೊಳ್ಳುತ್ತಾನೆ. ಮಲ್ಲಿಕಾ ಮರಿಯನ್ನು ತೋಳಿನಲ್ಲೆತ್ತಿ ಕೊಳ್ಳುತ್ತಾಳೆ. ಅದರ ಬಾಯನ್ನು ಪಾತ್ರೆಯ ಹತ್ತಿರ ಹಿಡಿಯುತ್ತಾಳೆ. ಜಿಂಕೆಯಮರಿ, ಒಂದೆರಡು ಬಾರಿ ಹಾಲನ್ನು ನಾಲಗೆಯಿಂದ ಸವಿದು, ಮುಖವನ್ನು ಬದಿಗೆ ಸರಿಸುತ್ತದೆ. ಕಾಳಿದಾಸ, ಪಾತ್ರೆಯನ್ನು ಇನ್ನೂ ಹತ್ತಿರಕ್ಕಿಡುತ್ತಾನೆ]

ಹಾಲು ಕುಡಿಯೋದಿಲ್ವೇನು? ಇಲ್ಲ. ಇಲ್ಲ. ಹೀಗೆಲ್ಲಾ ಹಟ ಹಿಡೀಬಾರ್ದು. ನಾವು ಖಂಡಿತ ಕುಡೀತೇವಲ್ವ

[ರಾಜವ್ಯಕ್ತಿ ದಂತುಲ ಬಾಗಿಲು ತೆರೆದುಕೊಂಡು ಹೊಸ್ತಿಲಿನವರೆಗೂ ಬಂದು ನಿಲ್ಲುತ್ತಾನೆ. ಕ್ಷಣ ಕಾಲ ಇಬ್ಬರನ್ನೂ ನೋಡುತ್ತಾನೆ. ಕಾಳಿದಾಸ ಮರಿಯ ತಲೆ ಹಿಡಿದುಕೊಂಡು, ಅದರ ಬಾಯನ್ನು ಹಾಲಿನ ಪಾತ್ರೆಯೊಳಕ್ಕೆ ಇರಿಸುತ್ತಾನೆ]

ಆಂ ! ಹಾಗೇ....

[ದಂತುಲ ಒಂದೆರಡು ಹೆಜ್ಜೆ ಮುಂದೆ ಬಂದು ಅವರ ಹತ್ತಿರ ನಿಲ್ಲುತ್ತಾನೆ.]

**ದಂತುಲ** :- ಹಾಲು ಕುಡಿಸಿ, ಮೃದುವಾದ ಇದರ ಮಾಂಸವನ್ನು ಇನ್ನೂ ಮೃದು ಮಾಡುತ್ತಿರುವೆಯಾ?

[ಕಾಳಿದಾಸ, ಮಲ್ಲಿಕಾ, ಬೆಚ್ಚಿ ಅವರತ್ತ ನೋಡುತ್ತಾರೆ. ಮಲ್ಲಿಕಾ ಹೆದರಿದವಳಂತೆ ಮರಿಯನ್ನಪ್ಪಿಕೊಂಡು ದೂರ ಸರಿಯುತ್ತಾಳೆ. ಕಾಳಿದಾಸ ಹಾಲಿನ ಪಾತ್ರೆಯನ್ನು ಮಣೆಯ ಮೇಲಿಡುತ್ತಾನೆ]

**ಕಾಳಿ** :- ನಂಗೆ ಗೊತ್ತಿರೋ ಹಾಗೆ, ನಮ್ಮಿಬ್ಬರ ಪರಿಚಯ ಇಲ್ಲಾ. ಅಪರಿಚಿತರ ಮನೆಗೆ ಬರೋ ಧೈರ್ಯವಾದರೂ ಹೇಗ್ಬಂತು ನಿಂಗೆ?

[ದಂತುಲ ಒಮ್ಮೆ ಮಲ್ಲಿಕಾಳ ಕಡೆಗೂ, ಮತ್ತೊಮ್ಮೆ ಕಾಳಿದಾಸನ ಕಡೆಗು ನೋಡುವನು.]

**ದಂತುಲ** :- ಎಂಥಾ ಯೋಗಾ ಯೋಗ? ನಾನೂ ಅದೇ ಕೇಳ್ಬೇಕಂತಿದ್ದೆ. ಇದಕ್ಕೆ ಮೊದ್ಲೆಂದೂ ನಮ್ಮಿಬ್ಬರ ಪರಸ್ಪರ ಪರಿಚಯವಿಲ್ಲದಿದ್ರೂ, ನನ್ನ ಬಾಣದಿಂದ ಬಿದ್ದ ಈ ಮರಿಯನ್ನು ಎತ್ತಿಕೊಂಡು ಬರೋಕೆ ನಿನಗೆ ನಾಚಿಕೆಯಾಗ್ಲಿಲ್ಲವೇ?

ಬಾಗಿಲವರೆಗೂ ಬಿದ್ದ ರಕ್ತದ ಕಲೆಯ ಗುರುತಿಂದ ಇಲ್ಲಿಗೆ ಬರೋಕಾಯ್ತು. ಇಲ್ಲದೆ ಇದ್ದರೆ ಮೋಡ ಕವಿದ ಈ ಹೊತ್ತಿನಲ್ಲಿ ನಿನ್ನನ್ನು ಹಿಂಬಾಲಿಸಿ ಬರಲು ಆಗುತ್ತಿತ್ತೆ?

ಕಾಳಿ :- ನೀನು ಇಲ್ಲಿಯವನ್ನಾಗೆ ಕಾಣ್ತಿಲ್ಲ.

[ದಂತುಲ ವ್ಯಂಗ್ಯವಾಗಿ ನಗುವನು]

ದಂತುಲ :- ನಿನ್ನ ಊಹೆ ಮೆಚ್ಚಿದೆ. ನನ್ನ ವೇಷವೇ ನಾನು ಇಲ್ಲಿನವನಲ್ಲಾಂತ ಹೇಳುತ್ತೆ.

ಕಾಳಿ :- ನಿನ್ನ ವೇಷ ನೋಡಿ ಹೇಳ್ತಿಲ್ಲ.

ದಂತುಲ :- ಹಾಗಾದ್ರೆ ಹಣೆಯ ಮೇಲಿನ ಗೆರೆಗಳನ್ನು ನೋಡಿ ಹೇಳಿದೆಯಾ? ಕಳ್ಳತನದ ಜೊತೆಗೆ ಸಾಮುದ್ರಿಕ ಶಾಸ್ತ್ರಾನೂ ಅಭ್ಯಾಸ ಮಾಡ್ತೀಂತ ಕಾಣುತ್ತೆ.

[ಮಲ್ಲಿಕಾ ಏಟು ತಿಂದವಳಂತೆ ಸ್ವಲ್ಪ ಮುಂದೆ ಬರುತ್ತಾಳೆ]

ಮಲ್ಲಿಕಾ :- ಹೀಗೆ ಇಲ್ಲ ಸಲ್ಲದ್ದನ್ನು ಹೊರಸೋಕೆ ನಾಚಿಕೆಯಾಗೊಲ್ವೆ?

ದಂತುಲ :- ಕ್ಷಮಿಸಬೇಕು ತಾಯಿ. ನಿಮ್ಮ ತೋಳಿನಲ್ಲಿರುವ ಈ ಜಿಂಕೆಯ ಮರಿಯನ್ನು ಹೊಡೆದು ಕೆಡವಿದವನು ನಾನು, ನನ್ನ ಬಾಣಗಳು, ಆದ್ದರಿಂದ ಇದು ನನ್ನ ವಸ್ತು. ನನ್ನದನ್ನ ನನಗೆ ಕೊಡ ಬಹುದಲ್ವೆ?

ಕಾಳಿ :- ಇಲ್ಲಿ ಜಿಂಕೆಗಳ ಬೇಟೆ ನಡೆಯೋದಿಲ್ಲ ರಾಜಪುರುಷ, ನೀನು ಹೊರಗಿನವ ನಾದ್ದರಿಂದಲೇ ನಿನ್ನ ಈ ತಪ್ಪನ್ನು ಕ್ಷಮಿಸಲಾಗುತ್ತಿರುವುದೇ ಹೆಚ್ಚು.

[ದಂತುಲ ವ್ಯಂಗ್ಯವಾಗಿ ನಗುವನು]

ದಂತುಲ :- ಹಾಗಾದ್ರೆ, ರಾಜ ವ್ಯಕ್ತಿಗಳ ತಪ್ಪನ್ನು ನಿರ್ಣಯಿಸುವವರು ಈ ಗ್ರಾಮವಾಸಿಗಳೊ? ಎಯ್ ಗಾವಿಲಯುವಕ, ನ್ಯಾಯ, ಅಪರಾಧ ಇವುಗಳ ಅರ್ಥವಾದ್ರೂ ನಿನಗೆ ಗೊತ್ತಿದೆಯೆ?

ಕಾಳಿ :- ಶಬ್ದ ಮತ್ತು ಅರ್ಥ ಇವು ಕೇವಲ ರಾಜ ಪುರುಷರ ಸ್ವತ್ತೂಂತ ತಿಳಿದು ನನಗೆ ಆಶ್ಚರ್ಯವಾಗ್ತಿದೆ.

[ಹಾಲನ್ನು ಮರಿಯ ಹತ್ತಿರಕ್ಕೆ ತರುತ್ತಾನೆ]

ದಂತುಲ :- ಬುದ್ಧಿವಂತನ ಹಾಗೇನೋ ಕಾಣ್ತಿ. ಆದ್ರೂ ರಾಜ ವ್ಯಕ್ತಿಗಳಿಗೆ ಹೆಚ್ಚಿನ ಅಧಿಕಾರವಿದೇನ್ನೋದು ತಿಳೀದು!.... ನನಗೆ ಹೊತ್ತಾಗ್ತಿದೆ ಅದನ್ನು ಇಲ್ಲಿ ಕೊಟ್ಬು ಬಿಡು.

ಕಾಳಿ :- ಈ ಮುದ್ದು ಜಿಂಕೆಯ ಮರಿ. ಇಲ್ಲಿನ ಪರ್ವತ ಪ್ರಾಂತದ ಸಂಪತ್ತು , ರಾಜಪುರುಷ, ಇದೇ ಪ್ರದೇಶದ ನಾವು ಇದರ ಸಜಾತೀಯರು. ಇದನ್ನು ನಿನಗೆ ಕೊಡ್ತೀನೀಂತ ತಿಳಿದು ತಪ್ಪು ಮಾಡ್ತಿದ್ದಿ.... ಮಲ್ಲಿಕಾ, ಇದನ್ನು

ಒಳಗೆ ಯಾವುದಾದ್ರೂ ಹಾಸಿಗೆ ಅಥವಾ ಚಾಪೆಯ ಮೇಲೆ.....

[ಅಂಬಿಕೆ ಅಕಸ್ಮಾತ್ತಾಗಿ ಒಳಗಿನಿಂದ ಬರುತ್ತಾಳೆ]

ಅಂಬಿಕಾ :- ಇಲ್ಲಿನ ಹಾಸಿಗೆ ಹೊದಿಕೆಗಳು ಜಿಂಕೆ ಮರಿಗಳಿಗಲ್ಲ.

ಮಲ್ಲಿಕಾ :- ಇದನ್ನೇ ನೋಡ್ತಿದ್ದೀಯಲ್ಲಮ್ಮ....

ಅಂಬಿಕಾ :- ಹೌದೌದು, ನೋಡ್ತಿದ್ದೀನಿ. ಅದಕ್ಕೇ ಹೇಳ್ತಿರೋದು. ಹಾಸಿಗೆ ಹೊದಿಕೆಗಳಿರೋದು ಮನುಷ್ಯರಿಗೆ ಪ್ರಾಣಿಗಳಿಗಲ್ಲ.

ಕಾಳಿ :- ಅದನ್ನು ಇಲ್ಲಿ ಕೊಟ್ಟು ಬಿಡು ಮಲ್ಲಿಕಾ.

[ಹಾಲಿನ ಪಾತ್ರೆಯನ್ನು ಕೆಳಗಿಟ್ಟು, ಜಿಂಕೆ ಮರಿಯನ್ನು ಕೈಗೆತ್ತಿಕೊಳ್ಳುತ್ತಾನೆ.]

[ಬಾಗಿಲ ಕಡೆಗೆ ಹೋಗುವನು. ದಂತುಲ ತೀವ್ರ ದೃಷ್ಟಿಯಿಂದ ಅವನನ್ನು ನೋಡುತ್ತಾನೆ]

ದಂತುಲ :- ಈ ರಾಜವ್ಯಕ್ತಿ ದಂತುಲ, ನೀನು ತೆಗೆದುಕೊಂಡು ಹೋಗೋದನ್ನ ನೋಡ್ತಾ ಇರ್ತಾನೆ!

ಕಾಳಿ :- ಇದು ಅವರ ಇಷ್ಟದಂತೇ

[ನಿಲ್ಲದೆ ಅವನ ಕಡೆ ನೋಡದೆಯೇ ಬಾಗಿಲ ಕಡೆ ಮರೆಯಾಗುತ್ತಾನೆ.]

ದಂತುಲ :- ರಾಜ ವ್ಯಕ್ತಿಗಳ ಇಷ್ಟಾ ನಿಷ್ಟಗಳನ್ನು ನಿನಗೆ ತಿಳಿಸಿ ಕೊಡಬೇಕಾಗಿದೇಂತ ಕಾಣುತ್ತೆ.

[ಕಾಳಿದಾಸ ಹೊರಗೆ ಹೋಗುವನು. ಅವನ ಮಾತು ಮಾತ್ರ ಕೇಳುತ್ತದೆ]

ಕಾಳಿ :- ಆಗ ಬಹುದು.

ದಂತುಲ :- ಆಗ ಬಹುದಾ?

[ಖಡ್ಗದ ಹಿಡಿಯ ಮೇಲೆ ಕೈಯಿಟ್ಟು ಅವನ ಹಿಂದೆ ಹೋಗ ಬಯಸುತ್ತಾನೆ. ಮಲ್ಲಿಕಾ ಬೇಗನೆ ಹೊರಟು ಬಾಗಿಲ ಮುಂದೆ ನಿಲ್ಲುತ್ತಾಳೆ.]

ಮಲ್ಲಿಕಾ :- ರಾಜ ಪುರುಷ, ನಿಲ್ಲು! ಜಿಂಕೆಯ ಮರಿಗೋಸ್ಕರ ಹಟ ಹಿಡೀಬೇಡ. ನಿನಗೆ ಅದನ್ನು ಕೇಳುವ ಅಧಿಕಾರವಿದ್ದರೆ ಅವನಿಗೆ ಅದನ್ನು ಸಂರಕ್ಷಿಸುವ ಆಧಾರವಿದೆ. ಕಾಳಿದಾಸ ಶಸ್ತ್ರ ಹೀನನಾದರೂ, ನಿನ್ನ ಶಸ್ತ್ರಗಳಿಗೆ ಅವನು ಹೆದರುವುದಿಲ್ಲ.

ದಂತುಲ :- ಕಾಳಿದಾಸ!...... ನೀನು ಹೇಳೋದು... ನಾನು ಜಿಂಕೆ ಮರಿಗಾಗಿ ಯಾರ ಹತ್ತಿರ ವಾದಿಸುತ್ತಿದ್ದೆನೋ ಅವನೇ ಕವಿಕಾಳಿದಾಸನೇ?

ಮಲ್ಲಿಕಾ :- ಹೌದು! ಹೌದು! ಆದ್ರೆ ಅವನು ಕವಿಯೆಂದು ನಿನಗೆ ಹೇಗೆ ಗೊತ್ತು.

ದಂತುಲ :- ಹೇಗೆ ಗೊತ್ತೇ? ಉಜ್ಜಯನಿಯ ರಾಜ ಸಭೆಗೆ ಸೇರಿದ ಪ್ರತಿಯೊಬ್ಬ ವ್ಯಕ್ತಿಗೂ 'ಋತುಸಂಹಾರ' ಕರ್ತೃ ಕಾಳಿದಾಸನೆಂದು ಗೊತ್ತು.

ಮಲ್ಲಿಕಾ :- ಉಜ್ಜೈನಿಯ ರಾಜಸಭೆಗೆ ಸೇರಿದ ಪ್ರತಿಯೊಬ್ಬರಿಗೂ ಅವನು ಗೊತ್ತೇ?

ದಂತುಲ :- ಸಾಮ್ರಾಟರು ಸ್ವತಃ ಕಾವ್ಯವನ್ನೋದಿ ಮೆಚ್ಚಿದ್ದಾರೆ. ಅದಕ್ಕಾಗಿ 'ಋತುಸಂಹಾರ' ಕಾವ್ಯ ಕರ್ತೃವಿಗೆ ಉಜ್ಜಯಿನಿಯ ಪರವಾಗಿ ಗೌರವ ಸಲ್ಲಿಸಿ ರಾಜಕವಿ ಪಟ್ಟವನ್ನು ಕಟ್ಟಬೇಕೆಂದು ಬಯಸಿದೆ. ಆಚಾರ್ಯ 'ವರರುಚಿ'ಗಳು ಇಂದು ಅದಕ್ಕಾಗಿಯೇ ಉಜ್ಜಯಿನಿಯಿಂದ ಇಲ್ಲಿಗೆ ಬಂದಿದ್ದಾರೆ.

[ಮಲ್ಲಿಕಾ, ಇನ್ನೂ ನಂಬಿಕೆ ಬಾರದವಳಂತೆ ಸ್ತಂಭೀಭೂತಳಾಗಿ ನಿಂತಿರುವಳು]

ಉಜ್ಜಯಿನಿ ಅವರಿಗೆ ಗೌರವಕೊಡಬೇಕೆಂದಿದೆಯೇ? ರಾಜಕವಿಪಟ್ಟ!

ದಂತುಲ :- ಅವರೊಂದಿಗೆ ತುಂಬಾ ಒರಟಾಗಿ, ಕೆಟ್ಟದಾಗಿ ನಡ್ಕೊಂಡೇಂತ ನನಗೆ ದುಃಖವಾಗ್ತಿದೆ. ಅವರಲ್ಲಿ ಹೋಗಿ ಕ್ಷಮೆ ಬೇಡ್ತೇನೆ.

[ದಂತುಲ ಹೊರಡುತ್ತಾನೆ. ಮಲ್ಲಿಕಾ ಕೆಲವು ಗಳಿಗೆ ಹಾಗೇ ನಿಂತಿದ್ದು ನಂತರ ಚೇತರಿಸಿ ಕೊಂಡಂತಾಗುವಳು. ಅಂಬಿಕಾ ಈ ಮಧ್ಯೆ ಹಾಲಿನ ಪಾತ್ರೆಯನ್ನು ಎತ್ತಿ ಒಂದು ಕಡೆ ಇಡುತ್ತಾಳೆ. ಮೊದಲು ಹಾಲಿದ್ದ ಪಾತ್ರೆಯನ್ನ ನೋಡಿ, ಅದರಲ್ಲಿ ಉಳಿದಿರುವ ಸ್ವಲ್ಪವನ್ನು ಬೇರೊಂದು ಪಾತ್ರೆಗೆ ಬಗ್ಗಿಸಿಕೊಂಡು ಸಕ್ಕರೆ ಬೆರೆಸುತ್ತಾಳೆ. ಉದ್ವಿಗ್ನತೆಯಿಂದ ಕೈ ನಡುಗುತ್ತದೆ. ಮಲ್ಲಿಕಾ ತುಟಿ ಕಚ್ಚಿ ಅವಳಲ್ಲಿಗೆ ಓಡಿ ಬರುತ್ತಾಳೆ.]

ಮಲ್ಲಿಕಾ :- ಕೇಳಿದ್ಯಾಮ್ಮಾ.... ರಾಜ್ಯ ಅವರಿಗೆ ರಾಜ ಕವಿ ಪಟ್ಟ ಕೊಡ ಬೇಕೆಂದಿದೆಯಂತೆ.

[ಕೆಳಗೆ ಬೀಳಲಿದ್ದ ಹಾಲಿನ ಪಾತ್ರೆಯನ್ನು ಹೇಗೋ ಸಾವರಿಸಿಟ್ಟು ಕೊಳ್ಳುತ್ತಾಳೆ]

ಅಂಬಿಕಾ :- ತೊಯ್ದ ಬಟ್ಟೇನೆಲ್ಲಾ ಒಣಗಲು ಹಾಕಿದ್ದೇನೆ. ಉಳಿದಿರೋ ಈ ಹಾಲಿಗೆ ಸಕ್ಕರೆ ಬೆರೆಸಿದ್ದೇನೆ ನೋಡು.

ಮಲ್ಲಿಕಾ :- ರಾಜಪುರುಷ ಏನು ಹೇಳ್ತಿದ್ದಾಂತ ನೀನು ಕೇಳ್ಳಿಲ್ವೇನಮ್ಮ?

ಅಂಬಿಕಾ :- ಈ ಹಾಲು ಮೊದ್ಲು ಕುಡಿ. ಕಂಡ ಕಂಡವರ ಉಪಚಾರ ಇನ್ನು ಮೇಲೆ ಇಲ್ಲಿ ಆಗ್ಬೇಕಾಗಿಲ್ಲ.

ಮಲ್ಲಿಕಾ :- ಉಪಚಾರ? ಈ ಮನೇಲಿ, ಪ್ರಪಂಚದಲ್ಲಿ ಇರೋವ್ರಿಗೆಲ್ಲಾ ಉಪಚಾರ ಮಾಡೋಹಾಗಾಗ್ಲೀಂತ ಇಷ್ಟಪಡ್ತೇವೆ.

[ಹಾಲಿನ ಬಟ್ಟಲನ್ನು ಕೈಗೆ ತೆಗೆದು ಕೊಳ್ಳುವಳು]

ಈ ಹಾಲಿನಿಂದ ನಿನ್ನನ್ನು ಮಾಯಿಸಲೇನಮ್ಮ?

[ಪಾತ್ರೆ ಮೇಲೆತ್ತುತ್ತಾಳೆ. ಅವಳ ಕೈಯಿಂದ ಅಂಬಿಕೆ ಬಟ್ಟಲನ್ನು ಕಿತ್ತು ಕೊಳ್ಳುತ್ತಾಳೆ]

ಅಂಬಿಕಾ :- ಈಗಾಗ್ಲೆ ಹಾಲ್ನಲ್ಲಿ ಮಿಂದು ಸಾಕಾಗಿದೆ.

ಮಲ್ಲಿಕಾ :- ನೀನೆಷ್ಟು ಕಠೋರ ಅಮ್ಮಾ! ಕೇಳ್ತಿಲ್ಲವೇ, ರಾಜ್ಯ ಅವ್ರಿಗೆ ಗೌರವ ನೀಡಲಿದೆಯಂತೆ. ಆದ್ರೂ ನೀನು...

ಅಂಬಿಕಾ :- ಮೊದ್ಲು ಹಾಲ್ಕುಡಿ ಮಳೆಯಲ್ಲಿ ತೊಯ್ದಿದ್ದು ಸಾಕಾದ್ರೆ ಹಾಸಿಗೆ ಹಾಸ್ಕೊಡ್ತೇನೆ... ನಾನು ಇರೋ ಹಾಗೆ ನಿಷ್ಠುರಿಯಾಗಿರ್ಲು ಬಿಡು.

[ಮಲ್ಲಿಕಾ ಅವಳಿಗೆ ತೆಕ್ಕೆ ಬೀಳುತ್ತಾಳೆ.]

ಮಲ್ಲಿಕಾ :- ಇಲ್ಲಮ್ಮಾ ನೀನು ತುಂಬಾ ಒಳ್ಳೆಯವಳು. ನೀನು ನಿಷ್ಠುರೀಂತ ಯಾವಾಗ ಹೇಳ್ದೆ?

[ಹಾಲಿನ ಬಟ್ಟಲನ್ನು ತೆಗೆದುಕೊಂಡು ಮಲ್ಲಿಕಾ ಒಂದೇ ಗುಟುಕಿಗೆ ಕುಡಿದು ಬಿಡುತ್ತಾಳೆ. ಬಟ್ಟಲನ್ನು ಒಂದು ಕಡೆಗಿಟ್ಟು ಅಂಬಿಕಾಳನ್ನು ಎಳೆದು ಕೂಡಿಸುತ್ತಾಳೆ. ಅವಳ ತೊಡೆಯ ಮೇಲೆ ತಲೆಯಿಟ್ಟು ತೋಳನ್ನು ಕೊರಳ ಸುತ್ತ ಬಳಸುತ್ತಾಳೆ.]

ಮಲ್ಲಿಕಾ :- ಅಮ್ಮಾ ಇವತ್ತು ನನ್ಗೆ ಎಷ್ಟು ಸಂತೋಷವಾಗಿದೆ ಗೊತ್ತಾ?

ಅಂಬಿಕಾ :- ಗೊತ್ತಾಗೋದಾದ್ರೂ ಹೇಗೆ ನನಗೆ? ಬಿಡು.... ನಾನು ಹೋಗ್ಬೇಕು.... ನನಗಿನ್ನೂ ಮಾಡಬೇಕಾದ ಕೆಲ್ಸ ಬಹಳವಿದೆ. [ಏಳಲು ಪ್ರಯತ್ನಿಸುತ್ತಾಳೆ. ಮಲ್ಲಿಕಾ ತಡೆದು ಕೂಡಿಸುತ್ತಾಳೆ]

ಮಲ್ಲಿಕಾ :- ಇಲ್ಲ ಕೂತ್ಕೋಮ್ಮ ಏಳಬೇಡ. ಹೀಗೇ ಕೂತಿರು.... ರಾಜ್ಯ ಅವರನ್ನು ಗೌರವಿಸುತ್ತಂತೆ.... ರಾಜಕವಿ ಪಟ್ಟ ಕೊಡಲಿದ್ದಾರಂತಮ್ಮ!!

[ಕೂಡಲೇ ಅವಳ ಮಡಿಲಿಂದ ಸರಿದು ಸರಿಯಾಗಿ ಎದ್ದು ಕುಳಿತುಕೊಳ್ಳುತ್ತಾಳೆ.]

ಯಾರನ್ನು ತಮ್ಮವರ್ಯಾರೂ, ಬಂಧುಗಳು, ಸ್ನೇಹಿತರೂ, ಹತ್ತಿರದವರೂ ಅರ್ಥಮಾಡಿಕೊಳ್ಳಲಿಲ್ಲವೋ ಕೇವಲ ದೂರಿ, ಹಿಯಾಳಿಸುತ್ತಿದ್ದರೋ ಅಂಥವ್ನಿಗೆ ಇಂದು ರಾಜ ಮರ್ಯಾದೆ. ಈಗಲಾದ್ರೂ ನನ್ನ ಭಾವನೆಗೆ ನನ್ನ ನಂಬಿಕೆಗೆ ಆಧಾರವಿಲ್ಲದಿಲ್ಲಾಂತ ನಂಬ್ತಿಯೇನಮ್ಮಾ?

[ಅಂಬಿಕೆ ಎದ್ದು ನಿಲ್ಲುವಳು]

ಅಂಬಿಕಾ :- ನಾನಾಗ್ಲೇ ಹೇಳಿದ್ದೇನೆ. ನನಗೆ ವಿಚಾರ ಮಾಡೋ ಶಕ್ತಿಯಿಲ್ಲ. ವಿವೇಕ ಜ್ಞಾನ ಇಲ್ಲಾಂತ. ನನ್ನ ಶಕ್ತಿಯೆಲ್ಲಾ ಇಂಗಿ ಹೋಗಿದೆ.

ಮಲ್ಲಿಕಾ :- ಯಾಕಮ್ಮಾ ನಿನಗಿಷ್ಟು ಹಟ! ಅವರ ವಿಚಾರವಾಗಿ ನೀನ್ಯಾಕೆ ಸ್ವಲ್ಪ

ಕಣ್ಣಿಟ್ಟು, ಮನಬಿಚ್ಚಿ ಯೋಚಿಸೊಲ್ಲ?

ಅಂಬಿಕಾ :– ಕಣ್ಮುಂದಿರೋದನ್ನ ಕಾಣದೆ ಬದುಕುವ ನನ್ನ ಕಾಲ ಮೀರಿ ಹೋಗಿದೆ.

[ಒಳಗೆ ಹೋಗಲು ಪ್ರಯತ್ನಿಸುತ್ತಾಳೆ. ಮಲ್ಲಿಕಾ ಎದ್ದು ನಿಲ್ಲುವಳು]

ಮಲ್ಲಿಕಾ :– ಕಣ್ಮುಂದಿರುವುದನ್ನೇ ಕಾಣುವ ನಿನ್ನ ಕಣ್ಣಿಗೆ ಕೇವಲ ತಪ್ಪುಗಳೇ ಕಾಣಬರುತ್ತವೆ.

[ಅಂಬಿಕೆ ಕ್ಷಣಕಾಲ ಅವಳನ್ನು ನೋಡುತ್ತಾಳೆ]

ಅಂಬಿಕಾ :– ತಪ್ಪಿದ್ದರೆ ತಪ್ಪೇ ಕಾಣುತ್ತೆ.

ಮಲ್ಲಿಕಾ :– ಅವರಲ್ಲಿ ನಿನಗೆ ಕಂಡ್ಬಂದ ತಪ್ಪಾದ್ರೂ ಏನು?

ಅಂಬಿಕಾ :– ಅವನಿಗೆ ಅವನಲ್ಲಿ ಮಾತ್ರ ಆಸಕ್ತಿ. ಬೇರೆ ಯಾವುದರಲ್ಲಿಯೂ ಅವನಿಗೆ ಮನಸ್ಸಿಲ್ಲ.

ಮಲ್ಲಿಕಾ :– ಅದಕ್ಕೇ ಅವ್ರು ಮಾತುಲನ ಹಸುಗಳನ್ನು ಮೇಯಿಸೋದು ಬಿಟ್ಟು, ಮೋಡಗಳ ಮೋಹಕತೆಯಲ್ಲಿ ಮೈ ಮರೆತಿರ್ತಾರೇಂತಲೇ?

ಅಂಬಿಕಾ :– ನನಗೆ ಮಾತುಲನಿಂದಾಗಲಿ, ಅವನ ಹಸುಗಳಿಂದಾಗ್ಲಿ ಏನೂ ಆಗ್ಬೇಕಿಲ್ಲ.

ಮಲ್ಲಿಕಾ :– ಕೂತ್ಕೋಮ್ಮಾ!

[ಅಂಬಿಕೆಯ ಕೈ ಹಿಡಿದು ಕೊಂಡು, ಕಿಟಕಿಯ ಬಳಿ ಇರುವ ಮಣೆಯ ಮೇಲೆ ಕೂಡಿಸುತ್ತಾಳೆ.]

ನೀನು ಹೇಳೋದ್ರ ಅರ್ಥ ತಿಳಿದು ಕೊಳ್ಳಬೇಕಂತಿದ್ದೀನಿ.

ಅಂಬಿಕಾ :– ನೀನು ಈ ದಿನ ತಿಳಿದುಕೊಳ್ಬೇಕಂತ್ಲೇ ನನಗೂ ಇದೆ. ನಿಮ್ಮಿಬ್ಬರದೂ ಭಾವ ಸಂಬಂಧಾಂತ ಹೇಳಿದೆಯಲ್ಲಾ? ಆ ಭಾವನೆಯಾದ್ರೂ ಎಂಥಾದ್ದು?

ಮಲ್ಲಿಕಾ :– ಅದಕ್ಕೇ ಯಾವ ಹೆಸ್ರೂ ಕೊಡೋಕೆ ನನಗಿಷ್ಟವಿಲ್ಲ.

[ಅಂಬಿಕೆಯ ಕಾಲಬಳಿ ಕೂಡುತ್ತಾಳೆ.]

ಅಂಬಿಕಾ :– ನೀನು ಅದಕ್ಕೆ ಹೆಸರಿಡ್ದೆ ಇದ್ರೂ ಜನರು ಅದ್ಕೆ ಹೆಸರಿಟ್ಟು, ಕರೀತಾರೆ. ನೀವಿಬ್ಬರೂ ಭಾವನೆಯಿಂದ್ಲೆ ವರಿಸಿದ್ರೆ ಅವನೇಕೆ ಮದುವೆಯಾಗೋಕೆ ಒಪ್ಪೊಲ್ಲ?

ಮಲ್ಲಿಕಾ :– ಅವರ್ನ ಯಾವಾಗ್ಲೂ ನೀನು ವಿಶಾಲವಾಗಿ ಅರ್ಥಮಾಡಿಕೊಂಡಿಲ್ಲ. ಅವರ ಜೀವನ ಎಂಥಾ ವಿಷಮ ಸನ್ನಿವೇಶಗಳಿಂದ ಕೂಡಿ ಕಳೆದಿದೇಂತ ನಿನಗೆ ಗೊತ್ತಿದೆ. ಮಾತುಲನ ಮನೆಯಲ್ಲಿ ಅವನ ಸ್ಥಾನ ಆದ್ರೂ ಏನು?

ಸಾಧನೆಯಿಲ್ಲದ, ಕೊರತೆ ತುಂಬಿದ ಬದುಕಿನಲ್ಲಿ ಮದುವೆಯ ಕಲ್ಪನೆಯಾದ್ರೂ ಹೇಗೆ ಬರ್ಲಿಕ್ಕೆ ಸಾಧ್ಯ?

ಅಂಬಿಕೆ :- ಅಂದ್ರೆ ಈಗ ಅವನ ಬದುಕು ಸಾಧನಾರಹಿತವೂ ಅಭಾವ ಗ್ರಸ್ತವೂ ಆಗಿರುವುದಿಲ್ಲವೇ?

[ಮಲ್ಲಿಕಾ ಕ್ಷಣ ಕಾಲ ಮೌನ. ಉಗುರಿನಿಂದ ನೆಲವನ್ನು ಕೆರೆಯುತ್ತಾಳೆ]

ಯಾವ ಸಂಬಂಧದಿಂದ ತಲೆ ತಪ್ಪಿಸಿಕೊಳ್ಳಲು ಕೊರತೆ ತುಂಬಿದ ಜೀವನ ಹೇಗೊಂದು ನೆಪವೊ, ಹಾಗೆಯೇ ಕೊರತೆಗಳು ಕಳೆದು, ತುಂಬಿದ ಬದುಕಾದಾಗ, ಅದೇ ಇನ್ನೂ ಹೆಚ್ಚಿನ ಕಾರಣವಾಗುತ್ತೆ

ಮಲ್ಲಿಕಾ :- ಇದು ನೀನಾಡುತ್ತಿರೋ ಮಾತಲ್ಲ. ವಿಲೋಮನಾಡೋ ಮಾತಂತಿದೆ.

ಅಂಬಿಕಾ :- ಇಂಥಾವ್ನು ನಾನು ಚೆನ್ನಾಗಿ ಬಲ್ಲೆ. ನಿನ್ನನ್ನು ಆಶ್ರಯಿಸಿ ತನ್ನನ್ನು ತಾನು ಪ್ರೀತಿಸೋದಕ್ಕೆ ಪ್ರೇಮಿಸುವುದಕ್ಕೆ, ನೀನೊಂದು ವಸ್ತು ಮಾತ್ರ, ಇದಿಷ್ಟಕ್ಕೇ ನಿನ್ನ ಜೀವನ ಸಂಬಂಧ. ನೀನೂ ಜೀವಂತ ವಸ್ತುವಲ್ಲವೇ? ನಿನಗೆ ಮಾಡಬೇಕಾದ ಕರ್ತವ್ಯ ಯಾವುದೂ ಇಲ್ಲವೇ ಅವನಿಗೆ? ನಾಳೆ ನಾನು ನಿನ್ನ ಪಾಲಿಗೆ ಇಲ್ದೇ ಹೋದಾಗ, ತಿನ್ನೋಕೆ ಒಂದು ಕಾಳು ಕೂಳಿಲ್ಲದೇ ಹೋದಾಗ, ನೀನು ಎದುರಿಸಬೇಕಾಗಿ ಬರೋ ಸಮಸ್ಯೆಗಳಿಗೆ ಏನುತ್ತರ ಹೇಳ್ತಿ? ನಿನ್ನ ಭಾವನೆ ಅದಕ್ಕೆ ಉತ್ತರವನ್ನು ಪರಿಹಾರವನ್ನು ಕೊಡುವುದೇನು? ಈಗ ಹೇಳು, ಇದು ಯಾರು ಹೇಳೋ ಮಾತೂಂತ? ನಿನ್ನದಲ್ಲ ವಿಲೋಮನ ಮಾತೂಂತ ಹೇಳು!!?

[ಮಲ್ಲಿಕಾ ತಲೆತಗ್ಗಿಸಿ ನೆಲವನ್ನು ಕೆರೆಯುತ್ತಿದ್ದು. ಒಂದು ಕ್ಷಣ ತಾಯಿಯ ಕಡೆಗೆ ನೋಡುತ್ತಾಳೆ.]

ಮಲ್ಲಿಕಾ :- ಅಮ್ಮಾ! ಇಲ್ಲಿವರೆಗೂ ಹೇಗೋ ಬದುಕಿದ್ದಾಗಿದೆ. ಹೀಗೇನೇ ಮುಂದೂ ಬದುಕಿದರಾಯ್ತು. ಈಗ ಈ ದಿನ ಅವರಿಗೆ ಒಳ್ಳೇ ಭವಿಷ್ಯತ್ತಿನ ಬಾಗಿಲು ತೆರೆಯುತ್ತಿರ ಬೇಕಾದ್ರೆ ನಾನು ನನ್ನ ಸ್ವಾರ್ಥದ ಶಂಖವನ್ನು ಊದುವುದಿಲ್ಲ. ಊದ ಬಯಸುವೂದೂ ಇಲ್ಲ

[ಬಾಗಿಲಿಂದ ಮಾತುಲನ ಧ್ವನಿ]

ಮಾತುಲ :- ಅಂಬಿಕಾ! ಅಂಬಿಕಾ! ಮನೇಲಿ ಇದ್ದೀಯೋ ಇಲ್ವೋ?

[ಅಂಬಿಕಾ ಮಲ್ಲಿಕಾ, ಬಾಗಿಲಿಂದಾಚೆ ನೋಡುತ್ತಾರೆ]

[ಅಸ್ತವ್ಯಸ್ತವಾಗಿ ಮಾತುಲನ ಪ್ರವೇಶ]

ಮಾತುಲ :- ಓಹೋ.... ಹೊ... ಹೊ ಮನೇಲೇ ಇದ್ದಿ. ಈ ದಿನ ನಾನು ಹಳ್ಳೀಲೆಲ್ಲಾ

ಕಾಳಿದಾಸನಿಗೂ ನನಗೂ ಯಾವ ಸಂಬಂಧ ಇಲ್ಲಾಂತ ತೋರಿಸ್ತೀನಿ.

ಮಲ್ಲಿಕಾ :- ಏನಾಯಿತು ಆರ್ಯ ಮಾತುಲರೆ?

ಮಾತುಲ :- ಇವನ್ನ ಸಾಕಿ ಸಲಹಿ ದೊಡ್ಡವನನ್ನಾಗಿ ಮಾಡ್ದೆ. ಆದ್ರೆ ಯಾತಕ್ಕೆ.... ವಂಶದ್ರೋಹಿಯಾಗ್ಲೀಂತ್ಲೆ?

ಮಲ್ಲಿಕಾ :- [ಸಂಕೋಚದಿಂದ ಕುಳಿತುಕೊಳ್ಳುತ್ತಾ ಮಾತುಲನತ್ತ ಆಶ್ಚರ್ಯದಿಂದ ನೋಡುತ್ತಾಳೆ]

ಮಲ್ಲಿಕಾ :- ಅವರಿಗೆ ಸನ್ಮಾನ ಮಾಡಬೇಕಂತ ರಾಜ್ಯದ ಕಡೆಯಿಂದ ಯಾರೊ ಒಬ್ಬರು ಬಂದಿದ್ದಾರೇಂತ ಕೇಳಿದೆ!

ಮಾತುಲ :- ಅದನ್ನೆ ಹೇಳಬೇಕಂತ ಇರೋದು. ಉಜ್ಜಯಿನಿಯಿಂದ ಬಹಳ ದೊಡ್ಡ ಆಚಾರ್ಯರು ಬಂದಿದ್ದಾರೆ.

ಮಲ್ಲಿಕಾ :- ಆದರೆ ತಾವೇನೋ ಹೇಳುತ್ತಿದ್ದಿರಿ....

ಮಾತುಲ :- ನಾನು ಸರಿಯಾಗಿಯೇ ಹೇಳುತ್ತಿದ್ದೇನೆ. ನಾಳೆಯೇ ಆಚಾರ್ಯರು ಅವನನ್ನು ತಮ್ಮೊಂದಿಗೆ ಕರೆದುಕೊಂಡು ಹೋಗಬೇಕೆಂದಿದ್ದಾರೆ.

ಮಲ್ಲಿಕಾ :- ಆದರೆ....

ಮಾತುಲ :- ಎರಡು ರಥ, ಇಬ್ಬರು ರಥ ಚಾಲಕರು ನಾಲ್ಕು ಮಂದಿ ಅಶ್ವಾರೋಹಿಗಳು ಅವರ ಜೊತೆ ಇದ್ದಾರೆ. ನಮ್ಮ ವಂಶದಲ್ಲಿ, ನಮ್ಮ ಮುತ್ತಜ್ಜನ ಇಬ್ಬರು ಮೊಮ್ಮಕ್ಕಳು ಗುಪ್ತರ ಪರವಾಗಿ ಶಕರೊಂದಿಗೆ ಹೋರಾಡಿದ್ದಾರೆ ಅನ್ನೋ ವಿಷಯ ನಿನಗೆ ಹೇಳಿದ್ದೆ ಅಲ್ವಾ ಅಂಬಿಕಾ?

ಅಂಬಿಕಾ :- ನೀನು ನಿನ್ನ ಸೋದರಳಿಯನ ಬಗ್ಗೆ ಹೇಳುತ್ತಿದ್ದೆ.

ಮಾತುಲ :- ಅವನ ವಿಷಯಾನೇ ಹೇಳ್ತಿರೋದು! ಒಂದು ಕಡೆಯಿಂದ ನೋಡಿದರೆ, ರಾಜ್ಯದಿಂದ ನಮ್ಮ ವಂಶಕ್ಕೆ ಗೌರವ ಸಲ್ಲುತ್ತಿದೆ. ಆದರೆ ಈ ವಂಶೋದ್ಧಾರಕ ನನಗೆ ಸನ್ಮಾನ ಗೌರವಗಳು ಬೇಡಾಂತ ಕೂತಿದ್ದಾನೆ.

[ಮಲ್ಲಿಕಾ ಥಟ್ಟನೆ ಎದ್ದು ನಿಲ್ಲುತ್ತಾಳೆ] ನಾನು ರಾಜಕೀಯ ಆಮಿಷಕ್ಕೆ ಒಳಗಾಗಲಾರೆ ಎನ್ನುತ್ತಾನೆ.

[ಉತ್ತೇಜಿತವಾಗಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಶತಪಥ ತಿರುಗುತ್ತಾನೆ ಮಲ್ಲಿಕಾ ಒಂದು ಕ್ಷಣ ಆತ್ಮ ವಿಸ್ಮೃತಳಾಗಿ ನಿಲ್ಲುತ್ತಾಳೆ]

ಮಲ್ಲಿಕಾ :- ರಾಜ ಗೌರವವನ್ನು ಸ್ವೀಕರಿಸುವುದಿಲ್ಲವಂತೇನು!

ಮಾತುಲ :- ಇದರಲ್ಲಿ ಆಮಿಷ, ಕ್ರಯ ವಿಕ್ರಯಗಳ ಪ್ರಶ್ನೆ ಎಲ್ಲಿಂದ ಬಂತು! ಗೌರವ

ಸಿಕ್ಕಿರುವಾಗ ಒಪ್ಪಿಕೊಳ್ಳಬೇಕು. ಇಲ್ಲವಾದಲ್ಲಿ ಕಾವ್ಯಕ್ಕೆ ಬಂದ ಬೆಲೆಯಾದರೂ ಏನು?

**ಮಲ್ಲಿಕಾ** :– ಕಾವ್ಯಕ್ಕೆ ಬೆಲೆ ಇರೋದ್ರಿಂದ್ಲೇ ಅವರು ಮಾಡೋ ಮರ್ಯಾದೆಗೂ ಒಂದು ಬೆಲೆಯಿದೆ. ಮಾತುಲರೇ! ಈ ರೀತಿಯ ಗೌರವದಿಂದ ಅವರ ಮನಸ್ಸಿಗೆಲ್ಲಿ, ಹೇಗೆ ನೋವಾಗುತ್ತೇನ್ನೋದು ನಂಗೊತ್ತು.

[ಅಂಬಿಕಾ ಏನನ್ನೋ ಯೋಚಿಸುತ್ತಾ ಸೆರಗಿನ ತುದಿಯನ್ನು ಬೆರಳಿಗೆ ಸುತ್ತಿ ಕೊಳ್ಳುತ್ತಾಳೆ]

**ಅಂಬಿಕಾ** :– ಅವನು ಉಜ್ಜಯನಿಗೆ ಹೋಗಿಯೇ ಹೋಗ್ತಾನೆ. ಅಂತ ನನಗೆ ನಂಬಿಕೆ ಇದೆ ಮಾತುಲ.

[ಮಾತುಲ ಹಾಗೆಯೇ ಓಡಾಡುತ್ತಿರುತ್ತಾನೆ]

**ಮಲ್ಲಿಕಾ** :– ಖಂಡಿತ ಹೋಗ್ತಾರೆ. ಅವರು ಇವರ ಸೇವಕರಾದ್ದರಿಂದ ಕಾಲಿಗೆ ಬಿದ್ದಾದ್ರೂ ಕರೆದೊಯ್ಯುತ್ತಾರೆ.

**ಅಂಬಿಕಾ** :– ಮನೆಗೆ ಬಂದ ಮರ್ಯಾದೆಯನ್ನು ಬೇಡಾಂತ ತಾತ್ಸಾರ ಮಾಡೋದ್ರಿಂದ, ಮರ್ಯಾದೆ, ಮಾಡಿಸಿ ಕೊಳ್ಳೋ ವ್ಯಕ್ತಿಯ ಮಹತ್ವ ಇನ್ನೂ ಹೆಚ್ಚುತ್ತೆಗೊತ್ತಾ? ಲೋಕನೀತಿಯಲ್ಲಿಯೂ, ನಿನ್ನ ಸೋದರಳಿಯ ಬುದ್ಧಿವಂತಾಂತ ಹೆಮ್ಮೆ ಪಡ್ಬೇಕು. ತಿಳೀತಾ?

[ಮಾತುಲ ಕೂಡಲೇ ಎದ್ದು ನಿಲ್ಲುತ್ತಾನೆ]

**ಮಾತುಲ** : ಇದನ್ನೇ ಲೋಕ ನೀತೀಂತ ಕರೆಯೋದಾದ್ರೆ ಮೂರ್ಖ ನೀತಿಗೂ, ಇದಕ್ಕೂ ಏನೂ ಅಂಥ ವ್ಯತ್ಯಾಸ ಇಲ್ಲಾಂತ ಕಾಣುತ್ತೆ. [ಮತ್ತೆ ತಿರುಗಾಡುತ್ತಾನೆ] ಮರ್ಯಾದೆ ಮಾಡೋ ವ್ಯಕ್ತಿ, ಹಣ ಕೊಡೋ ವ್ಯಕ್ತಿ ಮನಸ್ಸನ್ನು ಬದ್ಲಾಯಿಸಬಹುದು. ಹೀಗೆ ಬದಲಾದ್ರೆ ಇವನ ಭವಿಷ್ಯಾನೂ ಬದಲಾದ ಹಾಗೇನೆ! (ನಿಲ್ಲುವನು) ನೀನೇ ಯೋಚ್ನೆಮಾಡು. ಸಾಮ್ರಾಟರು ಒಬ್ಬ ಸಾಮಾನ್ಯ ಕವಿ ತಾನು ನೀಡಬೇಕೆಂದ ಸನ್ಮಾನಾನ ತಿರಸ್ಕರಿಸಿದಾಂದ್ರೆ ಕೃದ್ಧನಾಗಿ ಏನ್ಮಾಡಬಹುದೂಂತ! (ನಿಕ್ಷೇಪನ ಪ್ರವೇಶ)

**ನಿಕ್ಷೇಪನ** :– ಮಾತುಲರೇ ತಾವಿನ್ನೂ ಇಲ್ಲೇ ಇದ್ದೀರಾ? ಆಚಾರ್ಯರು ತಮ್ಮ ದಾರಿ ಕಾಯ್ತಿದ್ದಾರೆ.

**ಮಾತುಲ** :– ನೀನೇನು ಮಾಡ್ತಿದ್ದಿ ಇಲ್ಲಿ? ನಾನು ನಿನಗೆ ಹೇಳಿರಲಿಲ್ವೆ? ನಾನು ಬರೋವರೆಗೂ ಅವರ ಹತ್ತಿರವೇ ಇರೂಂತ.

**ನಿಕ್ಷೇಪ** :– ಆದ್ರೆ ಆಚಾರ್ಯರು ವಿಶ್ರಾಂತಿ ಮಾಡಿ ಎದ್ದ ಕೂಡ್ಲೆ ತಿಳಿಸೀಂತ್ಲೂ ಹೇಳಿದ್ದಿರಿ.

ಮಾತುಲ :- ಹೌದು ಅದ್ನೂ ಹೇಳಿದ್ದೆ. ಜೊತೆಗೆ ಇದ್ನೂ ಹೇಳಿದ್ದೆ, ಅದು ಮಾತ್ರ ಹಿಡೀತು ನಿನ್ನ ತಲೇಗೆ ಅಲ್ವಾ.... ಅವನಿನ್ನೂ ಬಂದಿಲ್ವೇನು?

ನಿಕ್ಷೇಪ :- ಆದ್ರೆ ಮಾತುಲರೆ....

ಮಾತುಲ :- ಆದ್ರೇನು?..... ಮಾತುಲ ಮೂರ್ಖ ಅಲ್ವಾ? ಹೇಳು ನನ್ನನ್ನು ಮುರ್ಖಾಂತ ತಿಳಿದಿದ್ದಿಯೆಂದು.

ನಿಕ್ಷೇಪ :- ಇಲ್ಲ ಮಾತುಲರೇ......

ಮಾತುಲ :- ನಾನು ಮುರ್ಖನಲ್ಲಾಂತಂದ ಮೇಲೆ ನೀನು ಖಂಡಿತಾ ಮೂರ್ಖನೇ ಹೌದು.... ಆಚಾರ್ಯರೇನು ಹೇಳಿದ್ರು?

ನಿಕ್ಷೇಪ :- ತಮ್ಮ ಜೊತೇಲಿ ಇಡೀಗ್ರಾಮವನ್ನು ಸುತ್ತಾಡ ಬೇಕಂತಾರೆ.

[ಹೆಮ್ಮೆಯ ಭಾವ ಮಾತುಲನ ಮುಖದ ಮೇಲೆ ಪ್ರಕಟವಾಗುವುದು]

ಕಾಳಿದಾಸನ ಕಾವ್ಯಕ್ಕೆ ಪ್ರೇರಣೆ ನೀಡಿದ ಪ್ರದೇಶ.....

[ಅಸೂಯೆಯ ಭಾವವಾಗಿ ಬದಲಾಗುತ್ತದೆ]

ಮಾತುಲ :- ಕಾಳಿದಾಸನ ಕಾವ್ಯ!?

(ಮತ್ತೆ ಸುತ್ತಾಡುವನು)

ಅಲ್ಲಾ ಇಷ್ಟು ದೊಡ್ಡ ಆಚಾರ್ಯರಿಗೆ ಇವನ ಕಾವ್ಯದಲ್ಲಿ ಅದೇನು ವಿಶೇಷ ಕಂಡು ಬಂತೋ?

[ತಡೆದು ಅಂಬಿಕಾಳ ಕಡೆ ನೋಡುವನು]

ಈ ಮನುಷ್ಯರಿಗೆ ಲೋಕ ವ್ಯವಹಾರ ಜ್ಞಾನವೇ ಇಲ್ಲಾಂದ್ಮೇಲೆ, ಲೋಕ ನೀತಿಯ ಮಾತಾಡ್ತಿನೀನು. ಒಂದು ಜಿಂಕೆ ಮರೀನ ಕಂಕುಳಲ್ಲಿ ಎತ್ತಿಕೊಂಡು ಮನೇ ಕಡೆ ಬರ್‍ತಿದ್ದ. ಅದೃಷ್ಟದಿಂದ ನಾನು ಹೊರಗಡೆ ನೋಡ್ತಿದ್ದೆ. ನಾನು ಬೇಡ್ಕೊಂಡೆ.... ಕವಿ ಕುಲ ಗುರುವೇ ಈ ವೇಷದಲ್ಲಿ ಈಗ ಮನೆಗೆ ಹೋಗ್ಬೇಡಿ. ಹಿರಿಯವ್ಯಕ್ತಿಗಳೊಬ್ಬರು ಬಂದಿದ್ದಾರೇಂತ. ಇದನ್ನ ಕೇಳಿದ ಕೂಡ್ಲೆ ಹಾವನ್ನು ಮೆಟ್ಟಿದ ಹಾಗೆ ಹೆದರಿ ಹಾಗೇ ಹೊರಟು ಹೋದ.

[ಮಲ್ಲಿಕಾ ಅಂಬಿಕಾಳ ಮಣೆಯ ಮೇಲೆ ಕೂಡುತ್ತಾಳೆ. ನಿಕ್ಷೇಪ ಭುಜ ಕುಲುಕುತ್ತಾನೆ.]

ಅಂಬಿಕಾ :- ಮಲ್ಲಿಕಾ ಮಾತುಲನಿಗೆ ಒಳಗಿಂದ ಒಂದು ಮಣೆ ತಂದು ಹಾಕು.

[ಮಲ್ಲಿಕಾ ಏಳುವಷ್ಟರಲ್ಲಿ ಮಾತು ತಡೆಯುತ್ತಾನೆ]

ಮಾತುಲ :- ಇಲ್ಲ ನನಗೆ ಮಣೆಗಿಣೇ ಬೇಕಿಲ್ಲ. ಆಚಾರ್ಯರು ನನ್ನ ದಾರಿ ಕಾಯ್ತಿದ್ದಾರೆ.

[ನಿಕ್ಷೇಪ ಅಂಬಿಕಾಳ ಕಡೆ ನೋಡಿ ಮುಸಿನಗುತ್ತಾನೆ. ಮಾತುಲ ಮೂಲೆಯ ಕಡೆಗೆ ಹೋಗಿ ಹಿಂತಿರುಗುತ್ತಾನೆ]

ನಾನು ಹೇಳ್ದೆ, ಕವಿಶ್ರೇಷ್ಠರೇ ನಿಮ್ಮನ್ನು ಕರೆದೊಯ್ಯಲು ಆಚಾರ್ಯರು ಉಜ್ಜೈನಿಯಿಂದ ಬಂದಿದ್ದಾರೆ. ನಿಮಗೆ ಗೌರವ ಮಾಡ್ತಾರಂತೇಂತ.'

[ನಿಲ್ಲುವನು]

ಕೇಳಿನಿಂತ. ನಿಂತು ಉರಿಗಣ್ಣಿಂದ ದುರುಗುಟ್ಟಿಕೊಂಡು ನೋಡಿ, ರಾಜ ಹಣಕ್ಕೆ ಮಾರಿಕೊಳ್ಳೊಕಲ್ಲ ನಾನಿರೋದೂಂತ–ಮಹಾ, ಇವನಿಗಾಗಿ ಹಣ ಕೊಳೀತಾ ಬಿದ್ದಿರೋ ಹಾಗೆ, ಮಾತಾಡಿ ಹೊರಟೇ ಹೋದ. ನನಗಂತೂ ಒಳ್ಳೇ ಪೀಕಲಾಟ. ಒಂದು ಕಡೆ ಇವನ ಹಿಂದೆ ಬೇಡ್ತಾ, ಪ್ರಾರ್ಥಿಸ್ತಾ ಕಾಲಿಗೆ ಬೀಳ್ತಾ ತಿರುಗ್ಲೋ, ಇಲ್ಲ ಬಂದವರ ಸತ್ಕಾರ ಮಾಡ್ಲೋ. ಇದೊಂದು ಅವರ ಹತ್ರ ಕೂತಿರೂಂದ್ರೆ ಕೀಲಿಯಿಲ್ಲದ ಗಾಲಿ ಹಾಗೆ ನನ್ನ ಹಿಂದಿಂದೇನೇ ಉರುಳಿ ಬಂದ.

ನಿಕ್ಷೇಪ :- ಆದ್ರೆ ಮಾತುಲರೆ ನಾನು ನಿಮಗೆ ವಿಷಯ ತಿಳಿಸೋಕೇಂತ ಬಂದಿದ್ದೀನಿ.

ಮಾತುಲ :- ಹಾಗಾದ್ರೆ ನೀನು ತಿಳಿಸಿದ್ದಕ್ಕೆ ನಾನು ಶಭಾಸಗಿರಿ ಕೊಡ್ತೀನಿ, ತುಂಬಾ ಒಳ್ಳೇ ಕೆಲ್ಸ ಮಾಡ್ದೆ. ಬಂದವರು ಅಲ್ಲಿ ಕೂತಿದ್ರೆ ಇಲ್ಲಿಗೆ ವಿಷಯ ತಿಳಿಸೋಕೆ, ಸುದ್ಧಿ ಹೇಳೋಕೇಂತ ಓಡಿ ಬಂದಿದ್ದಿ. ಆದ್ರೆ ನೀನಿಷ್ಟು ಮಾಡು 'ಕವಿಕುಲ ಶಿರೋ ಮಣಿಗಳು' ಎಲ್ಲಿದ್ದರೂ ಹುಡುಕಿ ತಾ.

[ಹೊರಗೆ ಹೋಗುತ್ತಾನೆ]

ಹೇಗಾದ್ರೂ ಎಳೆದು ತಂದು ಆಚಾರ್ಯರ ಮುಂದಿಡೋದು ನನ್ನ ಕರ್ತವ್ಯ. ಎಲ್ಲಿದ್ರೂ ಜುಟ್ಟು ಹಿಡ್ದು ಎಳೆದು ತರಬೇಕನ್ನಿಸುತ್ತೆ.

[ಹೊರಟು ಹೋಗುವನು]

ನಿಕ್ಷೇಪ :- ಮಾತುಲರಿಗೆ ಯಾವಾಗ್ಲೂ ಮೂಗಿನ ತುದೀಲೇ ಕೋಪ.

ಮಲ್ಲಿಕಾ :- ಕಾಳಿದಾಸ ಈಗ ಇರೋದಾದ್ರೂ ಎಲ್ಲೀಂತ?

ನಿಕ್ಷೇಪ :- ಈ ಹೊತ್ತು ಕಾಳಿದಾಸ ಜಗದಾಂಬೆ ದೇವಾಲಯದಲ್ಲಿದ್ದಾನೆ.

ಮಲ್ಲಿಕಾ :- ತಾವು ಅವರ್ನ ನೋಡಿದ್ರಾ?

ನಿಕ್ಷೇಪ :- (ತಲೆ ತೂಗುತ್ತಾ) ಹುಂ! ನೋಡಿದ್ದೆ.

ಮಲ್ಲಿಕಾ :- ಮತ್ತೆ ತಾವು ಮಾತುಲರಿಗೇಕೆ ಹೇಳಿಲ್ಲ?

ನಿಕ್ಷೇಪ :- ಈ ಸಮಯದಲ್ಲಿ ಅವ್ರು ಅಲ್ಲಿಗೆ ಹೋಗೋದು ನಂಗಿಷ್ಟವಿಲ್ಲ.

ಮಲ್ಲಿಕಾ :- ಯಾಕಿಷ್ಟವಿಲ್ಲ? ಹಾಗಾದ್ರೆ... ಕಾಳಿದಾಸ...?

ನಿಕ್ಷೇಪ :- ಕಾಳಿದಾಸ ಉಜ್ಜೈನಿಗೆ ಹೋಗ ಬೇಕೂನ್ನೋದೇ ನನ್ನ ಇಷ್ಟ. ಅದಕ್ಕೇ ಮಾತುಲರು ಅಲ್ಲಿಗೆ ಹೋಗೋದು ಬೇಡಾಂದದ್ದು. ಅವರಿಗೇ ಅವರ ಮಾತಿಂದ ಸಂತೋಷ ಸಿಗೋ ಹಾಗೇ ಕಾಣುತ್ತೆ. ಇಲ್ಲದಿದ್ರೆ ಸಮಯಾ ಸನ್ನಿವೇಶ ತಿಳ್ದು ಮಾತಾಡೋಕ್ಕೆ ಪ್ರಯತ್ನ ಪಡ್ತಿರ್ಲಿಲ್ವೆ? ಉಜ್ಜಯಿನಿಯಿಂದ ಬಂದಿರುವ ಅಭ್ಯಾಗತರು ಹೋಗುವವರೆಗೂ ಈ ಜಗದಂಬಾ ಗುಡಿಯಿಂದ ಬರೊಲ್ಲಾಂತ ಹಟ ಹಿಡಿದಿದ್ದಾರೆ.

ಅಂಬಿಕಾ :- ಇದೆಂಥಾ ಚಾತುರ್ಯ!

ನಿಕ್ಷೇಪ :- ಚಾತುರ್ಯ!

ಅಂಬಿಕಾ :- ಚಾತುರ್ಯತೆವಲ್ಲದೆ ಮತ್ತೇನು?

ನಿಕ್ಷೇಪ :- ಇದರಲ್ಲಿ ಚಾತುರ್ಯವೇನಿದೆ?

[ಅಂಬಿಕಾ ಚುಚ್ಚು ಗಣ್ಣಿಂದ ನೋಡುತ್ತಾಳೆ]

ಅಂಬಿಕಾ :- ರಾಜ್ಯ ಕವಿಯನ್ನು ಮರ್ಯಾದೆ ಮಾಡ ಬೇಕಂತಿದೆ. ಇಲ್ಲಿ ಕವಿಗಳಾದ್ರೋ ಸನ್ಮಾನ ಬೇಡಾ ಅನ್ನೋ ಹಾಗೆ ಜಗದಂಬಾ ಗುಡಿಯಲ್ಲಿ ಮೌನವಾಗಿ ಕಣ್ಮುಚ್ಚಿ ಧ್ಯಾನಾಸಕ್ತರಾಗಿದ್ದಾರೆ. ರಾಜಪ್ರತಿನಿಧಿಗಳು ಗುಡಿಗೆ ಹೋಗಿ ಕಾಡಿ, ಬೇಡಿ, ಕಾಲಿಗೆ ಬಿದ್ದು ಪ್ರಾರ್ಥಿಸುತ್ತಾರೆ. ಇವರು ನಿಧಾನವಾಗಿ ಕಣ್ಣು ಬಿಡ್ತಾರೆ.... ಇಂಥ ಅದ್ಭುತ ನಾಟಕವಾಡೋದು ಚಾತುರ್ಯವಲ್ಲದೆ ಮತ್ತೇನು?

ನಿಕ್ಷೇಪ :- ಕಾಳಿದಾಸ ನಾಟಕ ವಾಡ್ತಿಲ್ಲ ಅಂಬಿಕಾ. ಅವರಿಗೆ ರಾಜಗೌರವದ ಬಗ್ಗೆ ಆಸಕ್ತಿಯಿಲ್ಲಾನ್ನೋದ್ರಲ್ಲಿ ನನಗೆ ಸಂಶಯವಿಲ್ಲ. ನಿಜವಾಗ್ಲೂ ಈ ಪ್ರದೇಶಾನ ಬಿಟ್ಟು ಹೋಗ್ಲು ಇಷ್ಟ ಪಡ್ತಿಲ್ಲ.

[ಪಾತ್ರೆಗಳೆಲ್ಲಾ ಇರೋ ಕಡೇಗೆ ಹೋಗಿ ನಿಲ್ಲುತ್ತಾಳೆ ಅಂಬಿಕಾ]

ಅಂಬಿಕಾ :- ಇಷ್ಟವಿಲ್ಲ! ಹಂ!......

[ಒಂದು ತಟ್ಟೆ ತಂದು ಮಡಕೆಯೊಳಗಿಂದ ಅಕ್ಕಿ ತೆಗೆದು ಹಾಕಿ ಕೊಳ್ಳುತ್ತಾಳೆ]

ನಿಕ್ಷೇಪ :- ಮಾತುಲನ ಹಟವಾಗಲೀ ಅಥವಾ ಇನ್ಯಾರದೇ ಹಟವಾಗಲಿ, ಅವನ ಹಟವನ್ನು ಬಿಡಿಸೋಕೆ ಸಾಧ್ಯವಿಲ್ಲ.

[ಮಲ್ಲಿಕಾಳ ಕಡೆ ಅರ್ಥಗರ್ಭಿತವಾಗಿ ನೋಡಲು, ಮಲ್ಲಿಕಾ ಕೆಳಗೆ ನೋಡುತ್ತಾಳೆ]

ಕೇವಲ ಒಂದೇ ಒಂದು ವ್ಯಕ್ತಿಯ ಪ್ರಾರ್ಥನೆ, ಅವನನ್ನು ಹಟದಿಂದ ಬಿಡಿಸೋಕೆ ಸಾಧ್ಯ.

[ಅಂಬಿಕಾ ನಿಕ್ಷೇಪನ ಅರ್ಥಗರ್ಭಿತ ಕಣ್ಣನ್ನು ಮತ್ತು ಮಲ್ಲಿಕಾಳನ್ನು ನೋಡುತ್ತಾಳೆ]

ಅಂಬಿಕಾ :- ಅವನು ಹಟ ಬಿಟ್ರೆಷ್ಟು, ಬಿಡದಿದ್ರೆಷ್ಟು ನಮ್ಮನೇಲಿ ಯಾರಿಗೂ ಅದರಿಂದೇನೂ ಆಗಬೇಕಾದ್ದಿಲ್ಲ.

[ತಟ್ಟೆ ತೆಗೆದುಕೊಂಡು ಒಲೆಯ ಬಳಿ ಇವರಿಬ್ಬರ ಕಡೆ ಬೆನ್ನು ಮಾಡಿ ತನ್ನನ್ನು ಕೆಲಸದಲ್ಲಿ ತೊಡಗಿಸಿಡಲು ಪ್ರಯತ್ನಿಸುತ್ತಾಳೆ.]

ನಿಕ್ಷೇಪ :- ಕಾಳಿದಾಸನಿಗೆ, ಈ ಭಾವುಕತೆಯಿಂದಾಗಿ ಇಂತಹ ಅವಕಾಶ ಕಳೆದು ಕೊಂಡು ಎಂಥಾ ತಪ್ಪು ಮಾಡ್ತಿದ್ದೀನಿ ಎಷ್ಟು ಕಳ್ಕೊತಿದೀನಿ ಅನ್ನೋದೇ ಮರೆತ್ಹಾಗಿದೆ. ವ್ಯಕ್ತಿತ್ವದ ನಿರ್ಮಾಣದಲ್ಲಿ ಯೋಗ್ಯತೆ ಕಾಲು ಭಾಗವಾದರೆ ಮಿಕ್ಕದ್ದು ಪ್ರತಿಷ್ಠೆಯಿಂದ ಪೂರ್ತಿಯಾಗುತ್ತೆ. ಕಾಳಿದಾಸ ರಾಜಧಾನಿಗೆ ಹೋಗುವುದು ತೀರಾ ಅಗತ್ಯ.

(ಅಂಬಿಕಾ ವ್ಯಸ್ತಳಾಗಿರಲು ಪ್ರಯತ್ನಿಸಿದರೂ ಆಗುತ್ತಿಲ್ಲ)

ಅಂಬಿಕಾ :- ಅದರಲ್ಲಿ ತಪ್ಪೇನಿದೆ?

ನಿಕ್ಷೇಪ :- ಅವನು ಹಟ ಮಾಡುತ್ತಿರುವುದರ ಹಿಂದೆ ಬಹಳ ಆಳವಾದ ಕಹಿ ಅನುಭವವಿದೇಂತ ಅನಿಸುತ್ತೆ.

ಮಲ್ಲಿಕಾ :- ಅದು ಎಲ್ಲಿದೇಂತ ನನಗೆ ಗೊತ್ತು. ಒಬ್ಬರಾಜ ಪುರುಷನಿಂದ ಇದರ ಸಾಕ್ಷಾತ್ಕಾರ ಆಗಿದೆ.

ನಿಕ್ಷೇಪ :- ಅವನ ಮನದ ಕಹಿಯನ್ನು ನೀನೇ ದೂರ ಮಾಡಬಲ್ಲೆ ಮಲ್ಲಿಕಾ! ಅವಕಾಶ ಯಾರಿಗೂ ಕಾಯೊಲ್ಲ. ಕಾಳಿದಾಸ ಇಲ್ಲಿಂದ ಹೋಗಲಿಲ್ಲಾಂದ್ರೆ ರಾಜ್ಯಕ್ಕೆ ಯಾವ ಹಾನಿಯೂ ಆಗೋದಿಲ್ಲ, ರಾಜ ಕವಿ ಪೀಠ ಖಾಲಿಯಾಗೂ ಇರೊಲ್ಲ. ಆದರೆ ಕಾಳಿದಾಸ ಈಗ ಹೇಗಿದ್ದಾನೆ ಜೀವನ ಪರ್ಯಂತ ಹಾಗೇ ಇರ್ತಾನೆ. ಅದೂ ಒಬ್ಬ ಸ್ಥಳೀಯ ಕವಿಯಾಗಿ. ಯಾರೆಲ್ಲ 'ಋತು ಸಂಹಾರ' ಕಾವ್ಯವನ್ನು ಹೋಗೋಳುತ್ತಿದ್ದಾರೋ

ಕೆಲ ದಿನಗಳಲ್ಲಿ ಅದನ್ನೂ ಮರೆತು ಬಿಡ್ತಾರೆ.

(ಮಲ್ಲಿಕಾ ಯಾವುದೋ ಧ್ಯಾನದಲ್ಲಿ ಎದ್ದು ನಿಲ್ಲುತ್ತಾಳೆ)

ಮಲ್ಲಿಕಾ :- ಇಲ್ಲ, ಈ ಗೌರವವನ್ನು ಅವರು ತಿರಸ್ಕರಸಬಾರದು. ಇದು ಅವರ ವ್ಯಕ್ತಿತ್ವಕ್ಕೆ ಸಲ್ಲುತ್ತಿರುವ ಗೌರವ. ತಮ್ಮ ವ್ಯಕ್ತಿತ್ವವನ್ನು ಅದರಿಂದ ವಂಚಿಸಬಾರದು. ನಡೆಯಿರಿ ನಾನೂ ನಿಮ್ಮ ಜೊತೆ ಜಗದಾಂಬಾ ಮಂದಿರಕ್ಕೆ ಬರುತ್ತೇನೆ.

(ಅಂಬಿಕಾ ಆವೇಶದೊಂದಿಗೆ ದಿಢೀರನೆ ಎದ್ದು ನಿಲ್ಲುತ್ತಾಳೆ.)

ಅಂಬಿಕಾ :- ಮಲ್ಲಿಕಾ!

(ಮಲ್ಲಿಕಾ ದೃಢವಾಗಿ ನಿಲ್ಲುತ್ತಾಳಾದರೂ ನೋವಿನಿಂದ ತಾಯಿಯ ಕಡೆ ನೋಡುತ್ತಾಳೆ)

ಮಲ್ಲಿಕಾ :- ಅಮ್ಮಾ!

ಅಂಬಿಕಾ :- ನೀನು ಈ ರೀತಿ ಹೋಗ ಬೇಕಿಲ್ಲಾಂತ ಬೇರೆ ವ್ಯಕ್ತಿಯೆದುರಿಗೆ ಇವತ್ತು ಹೇಳ್ಬೇಕಾಗಿದೆ?

ನಿಕ್ಷೇಪ :- ನಿಕ್ಷೇಪ ಹೊರಗಿನವನೇನಲ್ಲಾ ಅಂಬಿಕಾ!

ಮಲ್ಲಿಕಾ :- ಇದೊಂದು ಒಳ್ಳೆಯ ಸೂಚನೆಯಮ್ಮಾ. ಈಗಂತು ನಾನಲ್ಲಿಗೆ ಹೋಗ್ಲೇ ಬೇಕಾಗಿದೆ. ಆರ್ಯನಿಕ್ಷೇಪರೇ ನಡೀರಿ.

[ಅಂಬಿಕಾಳ ಕಡೆ ನೋಡದೆಯೇ ಹೊರಟು ಹೋಗುವಳು. ಹೆಡೆಮೆಟ್ಟಿದ ಸರ್ಪದ ಕೋಪದಂತೆ ಕಂಡು ಬಂದರೂ ಮತ್ತೆ ಸೋತ ಅಸಹಾಯಕತೆಯ ಭಾವನೆಯಾಗಿ ಬದಲಾಯಿಸುತ್ತದೆ. ಅಂಬಿಕಾಳ ಈ ಬದಲಾಗುತ್ತಿರುವ ಭಾವನೆಗಳನ್ನು ನೋಡುತ್ತಾ ನಿಕ್ಷೇಪ ಕ್ಷಣಕಾಲ ನಿಲ್ಲುವನು.]

ನಿಕ್ಷೇಪ :- ಕ್ಷಮಿಸು ಅಂಬಿಕಾ!

[ಮಲ್ಲಿಕಾಳ ಹಿಂದೆ ಹೋಗುವನು. ಕಣ್ಮುಚ್ಚಿ ಸ್ವಲ್ಪ ಹೊತ್ತಿದ್ದು ಸುತ್ತಲಿನ ವಸ್ತುಗಳತ್ತ ಒಮ್ಮೆ ಕಣ್ಣು ಹಾಯಿಸುತ್ತಾಳೆ. ಜರ್ಝರಿತಳಂತೆ ಮಣೆಯ ಮೇಲೆ ಕುಳಿತು ಕೊಂಡು ತಟ್ಟೆಯಲ್ಲಿನ ಅಕ್ಕಿಯನ್ನು ಉಜ್ಜುತ್ತಾಳೆ. ಉಕ್ಕಿ ಬಂದ ಕಣ್ಣೀರನ್ನು ಸೆರಗಿನಿಂದ ಒರೆಸಿಕೊಳ್ಳುತ್ತಾಳೆ. ಬೆಳಕು ಕಡಿಮೆಯಾಗುತ್ತದೆ. ಗದ್ಗದ ಸ್ವರ ಹೊರಡುತ್ತದೆ.]

ಅಂಬಿಕಾ :- ಭಾವನೆ!...... ಓಹ್!

[ಸೆರಗಿನ ಮರೆಯಲ್ಲಿ ಮುಖ ಮುಚ್ಚಿ ಕೊಳ್ಳುತ್ತಾಳೆ. ಬೆಳಕು ಇನ್ನೂ ಸ್ವಲ್ಪ ಕಡಿಮೆಯಾಗುವುದು. ಕೂಡಲೇ ಬಾಗಿಲಿನ ಬಳಿ ಪಂಜಿನ ಬೆಳಕು ಕಾಣುತ್ತದೆ. ಕೈಲಿ

ಪಂಜು ಹಿಡಿದು ವಿಲೋಮನ ಪ್ರವೇಶ. ಅಂಬಿಕಾಳನ್ನು ಈ ಸ್ಥಿತಿಯಲ್ಲಿ ಕಂಡು ಬೆಚ್ಚಿದಂತೆ ಒಂದು ಕ್ಷಣ ನಿಲ್ಲುತ್ತಾನೆ. ನಂತರ ಅವಳ ಹತ್ತಿರ ಬರುತ್ತಾನೆ.]

ವಿಲೋಮ :- ಕವಿದ ಮೋಡಗಳು, ಇಷ್ಟು ಬೇಗನೇ ಕತ್ತಲು ತುಂಬಿದೆಯೋ ಅಥವಾ ನಿನಗೇ ಹೊತ್ತಿನ ಪರಿವೆಯಿಲ್ಲವೋ ಅಂಬಿಕ?

[ಸೆರಗಿನಿಂದ ಮುಖ ಎತ್ತುತ್ತಾಳೆ. ಪಂಜಿನ ಬೆಳಕಲ್ಲಿ ಅವಳ ಮುಖಭಾವ ಇನ್ನೂ ಸ್ಪಷ್ಟವಾಗಿ ಕಣ್ಣುಗಳು ಹೂತಂತೆ ಕಾಣುತ್ತವೆ.]

ಏನಾಶ್ಚರ್ಯ, ಇನ್ನೂ ದೀಪಾನೇ ಹೊತ್ತಿಸಿಲ್ವೆ?

ಅಂಬಿಕಾ :- ವಿಲೋಮ! ಇಲ್ಲಿ ಯಾಕೆ ಬಂದೀ ನೀನು?

[ಎಡಗಡೆ ದೀಪವಿರುವ ಕಡೆಗೆ ಹೋಗುವನು]

ವಿಲೋಮ :- ದೀಪ ಹೊತ್ತಿಸ್ಲೇ?

[ಪಂಜಿನ ಬೆಂಕಿಯಿಂದ ದೀಪಗಳನ್ನು ಹಚ್ಚುವನು]

ವಿಲೋಮ ಬರೋದು ಆಶ್ಚರ್ಯದ ವಿಷಯವೇನಲ್ಲ.

[ಮುಂದಿರುವ ದೀಪಗಳನ್ನು ಹಚ್ಚಲು ತೊಡಗುತ್ತಾನೆ. ಅಂಬಿಕಾ ಎದ್ದು ನಿಲ್ಲುವಳು]

ಅಂಬಿಕಾ :- ನೀನು ಹೊರಟು ಹೋಗು ವಿಲೋಮ. ನಿನಗೆ ಗೊತ್ತೇನು ನೀನಿಲ್ಲಿಗೆ ಬರೋದು.....

[ದೀಪ ಹಚ್ಚಿ ಅಂಬಿಕಾಳ ಕಡೆ ತಿರುಗುತ್ತಾನೆ]

ವಿಲೋಮ :- ನನಗೆ ಗೊತ್ತು ಅಂಬಿಕಾ, ಮಲ್ಲಿಕಾ ಹುಡುಗಿ, ಅವಳಿಗೇನೂ ತಿಳೀದೂ ಪ್ರಪಂಚಾಂದ್ರೇನು? ಜೀವನಾಂದ್ರೇನೂ ಅನ್ನೋದೇ ಗೊತ್ತಿಲ್ಲ ಅವಳಿಗೆ. ನಾನು ಬರೋದು ಮಲ್ಲಿಕಾಗೆ ಇಷ್ಟ ಇಲ್ಲ ಯಾಕೇಂದ್ರೆ ಕಾಳಿದಾಸನಿಗೆ ಇಷ್ಟ ಇಲ್ಲ. [ತಿರುಗಿ ಅಂಬಿಕಾಳ ಬಳಿಗೆ ಬರುವನು]

ಕಾಳಿದಾಸನಿಗೆ ಯಾಕೆ ಬೇಡಾಂದ್ರೆ, ನನ್ನ ಕಣ್ಣಲ್ಲಿ ಅವನ ಹೃದಯದಲ್ಲಿನ ನಿಜವಾದ ಗುಟ್ಟು ಪ್ರತಿಬಿಂಬಿಸುತ್ತೆ. ಅದರಿಂದ ಅವನಿಗೆ ಸಹಿಸೋಕೆ ಕಷ್ಟವಾಗುತ್ತೆ. ಅಂಬಿಕಾ, ನಿನಗೆ ಗೊತ್ತಿರೋ ಹಾಗೆ ನನ್ನದು ಒಂದೇ ಒಂದು ತಪ್ಪೂಂದ್ರೆ ಇದ್ದದ್ದನ್ನು ಸ್ಪಷ್ಟವಾಗಿ, ನೇರವಾಗಿ ಹೇಳಿ ಬಿಡ್ತೀನಿ.

ಅಂಬಿಕಾ :- ಈಗ ನಿನ್ನ ತಪ್ಪು ನೆಪ್ಪುಗಳ ವಿಮರ್ಶೆ ಮಾಡಬಯಸ್ತಿಲ್ಲ.

ವಿಲೋಮ :- ಈ ದಿನ ನೀನೇನೋ ಬಹಳ ನೊಂದ ಹಾಗೆ ಕಾಣುತ್ತೆ. ಆದ್ರೆ ನೀನು ಎಂದು ತಾನೇ ಸುಖವಾಗಿದ್ದಿ? ಯಾವಾಗ್ಲೂ ಗೋಳೇ ನಿನ್ನ ಬಾಳಿನ

ಕತೆಯಾಗಿದೆ. ಮೊದಲಿಗಿಂತ ತೀರಾ ಇಳಿದು ಹೋಗಿದ್ದಿ. ಕಾಳಿದಾಸ ಉಜ್ಜಯನಿಗೆ ಹೋಗ್ತಿದ್ದಾನಂತೆ. ಕೇಳಿದೆಯೇನು ಸುದ್ದೀನ?

ಅಂಬಿಕಾ :– ಇಲ್ಲ ಕೇಳಿಲ್ಲ.

[ಅವಳ ಮಾತು ಕೇಳಿಸಿ ಕೊಳ್ಳದವನಂತೆ ಕಿಟಕಿಯ ಹತ್ತಿರ ಹೋಗುವನು]

ವಿಲೋಮ :– ರಾಜ್ಯದ ಪರವಾಗಿ ಸನ್ಮಾನ! ರಾಜ ಕವಿಯಾಗಿ ಉಜ್ಜಯಿನಿಯಲ್ಲಿ ಕಾಳಿದಾಸನವಾಸ! ಅವನು ಹೋಗೋಕೆ ಮೊದ್ಲೇ ಮಲ್ಲಿಕಾ ಮತ್ತು ಕಾಳಿದಾಸನ ಮದುವೆಯಾಗೋದು ಒಳ್ಳೇದು ಅನ್ಸುತ್ತೆ. ಇಲ್ಲಾಂದ್ರೆ....ಈ ವಿಚಾರದಲ್ಲಿ ನೀನು ಯೋಚಿಸಿರಬೇಕಲ್ವೆ?

[ಅಂಬಿಕಾ ಕ್ಷಣ ಕಾಲ ಹಣೆಯನ್ನು ಕೈಯಿಂದ ಹಿಡಿದು ಕೂಡುವಳು]

ಅಂಬಿಕಾ :– ಈಗ ನಾನು ಏನೂ ಯೋಚಿಸಬೇಕಿಲ್ಲ.

ವಿಲೋಮ :– ಮಲ್ಲಿಕಾಳ ತಾಯಿಯಾಗಿ, ಈ ವಿಚಾರ ಆಲೋಚಿಸೊಲ್ಲಾಂತೀಯಲ್ಲ? ಆಶ್ಚರ್ಯ!

[ಕಿಟಕಿಯ ಕಡೆ ಬೆನ್ನು ಮಾಡಿ ವಿಲೋಮ ನಿಲ್ಲುತ್ತಾನೆ]

ವಿಲೋಮ :– ಕಾಳಿದಾಸನೇನೋ ಉಜ್ಜಯನಿಗೆ ಹೊರಟ. ಆದರೆ ಇಡೀ ಹಳ್ಳೀಲಿ ಆಡ್ಕೋಳ್ಳೋಕೆ ಆಹಾರವಾಗಿರೋ ಮಲ್ಲಿಕಾ ಇಲ್ಲಿಯೇ ಬಿದ್ದಿರ್ತಾಳೆ? ಅಲ್ವಾ ಅಂಬಿಕ?

[ಏನನ್ನೂ ಹೇಳದೆ ಸೆರಗಿನಿಂದ ಕಣ್ಣುಜ್ಜಿ ಕೂಡುತ್ತಾಳೆ. ವಿಲೋಮ ತಿರುಗಿ ಅವಳೆದುರು ಬರುತ್ತಾನೆ.]

ಇಷ್ಟು ದಿವಸ ಪಡಬಾರದ ಕಷ್ಟವನ್ನೆಲ್ಲ ಪಟ್ಟು ಸಹಿಸಿನುಂಗಿದ್ದು ಈ ದಿನ ಕಾಣೋಕೆಯೇನು? ದೂರದಿಂದ ನೋಡುವವರಿಗೇ ಗೊತ್ತಾಗುತ್ತೆ, ನೀನೇನು ಅನುಭವಿಸಿದ್ದಿ! ಏನೇನು ನಡೆದಿದೆ ನಿನ್ನ ಜೀವನದಲ್ಲೀಂತ! ಕಾಲಾನ್ನೋದು ನಿನ್ನ ಮೈ, ಮನ ಆತ್ಮಗಳನ್ನು ಜೀರ್ಣಗೊಳಿಸಿ ಬಿಟ್ಟಿದೆ. ಛಿದ್ರ ಛಿದ್ರ ಮಾಡಿದೆ. ಮಲ್ಲಿಕಾಳಿಗೆ ಯಾವೊಂದು ರೀತಿಯಲ್ಲಿಯೂ ಕೊರತೆಯೆನ್ನಿಸಬಾರದೂಂತ, ನಿನ್ನನ್ನ ನೀನೇ ಸವೆಸಿಕೊಂಡೆ. ಆದ್ರೆ ಅವಳ ಮುಂದೆ ಜೀವನದ ಪ್ರಶ್ನೆ ಎದುರಾಗಿರುವಾಗ ಏನೂ ಯೋಚಿಸೊಲ್ವೆ?

ಅಂಬಿಕಾ :- ಇದನ್ನೆಲ್ಲಾ ಹೇಳಿ, ನೆನಪಿಗೆ ತಂದು ಈಗ ಇರೋ ದುಃಖಾನ ದೂರ ಮಾಡ್ತಿಲ್ಲ ವಿಲೋಮ! ಕೈ ಮುಗಿದು ಕೇಳ್ಕೋತೀನಿ. ಒಬ್ಬಳೇ ಇರೋಕೆ ಬಿಡುನನ್ನ.

ವಿಲೋಮ:- ಈ ಹೊತ್ತು ನಿನ್ಹತ್ರ ಇರೋದು ತುಂಬಾ ಅಗತ್ಯ ಅನ್ಸುತ್ತೆ ಅಂಬಿಕಾ. ಇದ್ನೆಲ್ಲಾ ಅವ್ನಿಗೆ ಹೇಳೋಕೇಂತಲೇ ಬಂದೆ. ಇನ್ನೇನು ಇಬ್ಬರೂ ಇಲ್ಲಿಗೇ ಬರೋ ಭರವಸೆಯಿದೆ. ಜಗದಂಬಾ ಗುಡಿಯ ಕಡೆ ಮಲ್ಲಿಕಾ ಹೋಗುತ್ತಿರೋದ್ನ ನೋಡ್ದೆ. ಇಲ್ಲೇ ಅವಳ ದಾರಿ ಕಾಯೋದು ನನಗಿಷ್ಟ.

[ಬಾಗಿಲೊಳಗಿಂದ ಕಾಳಿದಾಸ, ಹಿಂದೆ ಮಲ್ಲಿಕಾಳ ಪ್ರವೇಶ]

ಕಾಳಿ :- ತುಂಬಾ ಕಾಯಬೇಕಿಲ್ಲ ವಿಲೋಮ.

[ಕಾಳಿ ವಿಲೋಮನನ್ನು ಕಂಡೊಡನೆ, ಕ್ರೋಧಾಸೂಯೆಯ ಭಾವನೆ ಮಲ್ಲಿಕಾಳ ಮುಖದ ಮೇಲೆ ಮೂಡುತ್ತದೆ. ಅವಳು ನೇರಾಗಿ ಕಿಟಕಿಯ ಕಡೆ ಹೊರಡುತ್ತಾಳೆ. ಕಾಳಿದಾಸ ವಿಲೋಮನ ಸಮೀಪಕ್ಕೆ ಬರುವನು.]

ನನಗ್ಗೊತ್ತು. ನೀನು ಎಲ್ಲಿ ಯಾವಾಗ, ಯಾಕೆ ನನ್ನ ಕಾಣೋಕೆ ಚಡಪಡಿಸುತ್ತೀಂತ! ಏನು...? ಇತ್ತೀಚಿಗೇನಾದ್ರೂ ಹೊಸ ವೃತ್ತಗಳ ಪ್ರಯೋಗ ಅಭ್ಯಾಸ ನಡೆದಿದೆಯೇನು?

ವಿಲೋಮ:- ವೃತ್ತಗಳ ಅಭ್ಯಾಸ ನನ್ನ ವೃತ್ತಿಯಲ್ಲ!

ಕಾಳಿ :- ನನಗ್ಗೊತ್ತು ನಿನ್ನ ವೃತ್ತಿಯಾವುದೂಂತ?

[ಕಣ್ಣಲ್ಲಿ ಕಣ್ಣಿಟ್ಟು ಕ್ಷಣಕಾಲ ನೋಡುವನು]

ಈ ವೃತ್ತಿ ಆ ವೃತ್ತಗಳ (ಅಧ್ಯಯನ) ಅಭ್ಯಾಸಕ್ಕೆ ಬಿಡುವು ಕೊಡದಿರಬಹುದು.

ವಿಲೋಮ :- ನಿನ್ನ ವೃತ್ತಗಳ ಪ್ರಯೋಗ ಪರಿಣತಿಗೆ ಈ ದಿನ ನೀನು ಖಂಡಿತಾ ಹೆಮ್ಮೆ ಪಡಬಹುದು.

[ಪಂಜುಗಳನ್ನಿಟ್ಟು ಅಲ್ಲಿಗೆ ಹೋಗಿ ಅದರ ಹಿಡಿಯನ್ನು ಸರಿ ಮಾಡತ್ತಾನೆ. ಪಂಜಿನ ಬೆಳಕು ಅವನ ಮುಖದ ಮೇಲೆ ಬೀಳುತ್ತದೆ.]

ವಿಲೋಮ :- ರಾಜಧಾನಿಯಿಂದ ನಿನಗೆ ಕರೆ ಬಂದಿದೇಂತ ಕೇಳಿದೆ.

ಕಾಳಿ :- ನಾನೂ ಕೇಳಿದೆ. ನಿನಗೆ ದುಃಖವಾಯ್ತೇನು?

ವಿಲೋಮ :- ಆದ್ರೆ ನನಗ್ಗೊತ್ತು. ಆಚಾರ್ಯರು ನಾಳೆ ಬ್ರಾಹ್ಮೀ ಮಹೂರ್ತಕ್ಕೆ ಯಾಕಂದ್ರೆ

ಹೋಗಬೇಕೆಂದಿದ್ದಾರೆ.... ಅಲ್ಲಿನ ರಾಜವೈಭವ ಜೀವನದಿಂದ ನಮ್ಮ ಈ ಹಳ್ಳೀನ ಮರೆಯೋದಿಲ್ಲ ತಾನೆ? [ಮಲ್ಲಿಕಾಳ ಕಡೆ ಒಮ್ಮೆ, ಮತ್ತೊಮ್ಮೆ ಕಾಳಿದಾಸನ ಕಡೆಗೆ ನೋಡುವನು]

ಅಲ್ಲಿಗೆ ಹೋದವರು ತುಂಬಾ ವ್ಯಸನಿಗಳಾಗುತ್ತಾರೇಂತ ಕೇಳಿದ್ದೀನಿ. ತುಂಬಾ ಆಕರ್ಷಕ ವಸ್ತುಗಳು!..... ರಂಗ ಶಾಲೆ, ಮದಿರಾಲಯ, ....ಇನ್ನೂ ಏನೇನೋ ವಿಲಾಸ ಸ್ಥಳಗಳೂ ಇವೆಯಂತೆ!

ಮಲ್ಲಿಕಾ :- ಆರ್ಯ ವಿಲೋಮರೇ. ಇಂಥಾ ಮಾತುಗಳಾಡೋಕೆ ಇದು ಸರಿಯಾದ ಸ್ಥಳವಲ್ಲಾನ್ನೋದು ಹೇಳಬೇಕಾಗಿಲ್ಲ. ನಿಮ್ಮನ್ನು ಇಲ್ಲಿ ನೋಡ್ತೀನೀಂತ ನಾನು ನಿರೀಕ್ಷಿಸಿರಲಿಲ್ಲ.

ವಿಲೋಮ :- ನಾನು ಇಲ್ಲಿ ಇರೋದು ನಿನಗೆ ಹಿಡ್ಸೊಲ್ಲಾನ್ನೋದು ನನಗೆ ಗೊತ್ತೇ ಇತ್ತು. ಆದ್ರೆ ನಾನು ಬಂದದ್ದು ಅಂಬಿಕಾನ ನೋಡೋಕೆ. ತುಂಬಾ ದಿವಸದಿಂದ ನಾನು ಆಕೇನ ಭೆಟ್ಟಿಯಾಗಿರಲಿಲ್ಲ. ಅದಕ್ಕಂತ್ಲೇ ಬಂದೆ. ಇದು ಬೇಡದೆಯಿರೋಂತ ವಿಷಯವೇನಲ್ಲ?

ಕಾಳಿ :- ವಿಲೋಮ ಮಾಡೋದ್ಯಾವುದೂ ಬೇಡ್ದೇ ಇರೋಂತಾದ್ದಲ್ಲ. ಕೆಲವು ಸಾರಿ ಮಾಡ್ತಿರೋದೂ ಬೇಡದಿರೋದೆ ಆಗಿರುತ್ತೆ.

ವಿಲೋಮ:- ನಾವಿಬ್ಬರೂ ಪರಸ್ಪರ ಅರ್ಥ ಮಾಡ್ಕೊಂಡಿರೋದೇ ಒಂದು ಸಂತೋಷದ ವಿಷಯ. ಆದ್ರೆ ನಿನಗೆ ತಿಳೀದಿರೋ ಹಾಗೆ ನನ್ನ ಮಾತಿನಲ್ಲಿ, ನನ್ನ ಸ್ವಭಾವದಲ್ಲಿ ಯಾವುದೂ ಮುಚ್ಚು ಮರೆಯಿಲ್ಲ

[ಕ್ಷಣಕಾಲ ಕಾಳಿದಾಸನ ಕಣ್ಣಲ್ಲಿ ಕಣ್ಣಿಟ್ಟು ನೋಡುವನು]

ವಿಲೋಮ ಯಾರು? ಒಬ್ಬ ನಿಷ್ಫಲ ಕಾಳಿದಾಸ. ಮತ್ತು ಕಾಳಿದಾಸ ಒಬ್ಬ ಸಫಲನಾದ ವಿಲೋಮ. ಎಲ್ಲೊ ನಾವಿಬ್ಬರೂ ಒಂದೇ ಅಂತ ಅನ್ನಿಸುತ್ತೆ,

[ಪಂಜುಗಳಿರುವಲ್ಲಿಂದ ಕಾಳಿದಾಸನ ಹತ್ತಿರಕ್ಕೆ ಬರುತ್ತಾನೆ.]

ಕಾಳಿ :- ಎಲ್ಲಾ ವಿಪರೀತ, ವಿರೋಧಗಳೂ ಒಂದೇ ಕಡೆ ಕೂಡುವುದರಲ್ಲಿ ಸಂದೇಹವೇ ಇಲ್ಲ.

ವಿಲೋಮ:- ಈ ಸತ್ಯವನ್ನು ಒಪ್ತಿ ಹಾಗಾದರೆ?

ಒಳ್ಳೇದು ನಿನ್ನ ಆತ್ಮೀಯನಾದ್ದರಿಂದ ನಾನೊಂದು ಪ್ರಶ್ನೆ ಕೇಳ್ತೇನೆ,

ನೀನು ಇನ್ನು ನನ್ನ ಕೈಗೆ ಸಿಗದೇ ಹೋಗಬಹುದು. ಒಂದು ದಿನದ ಅಂತರವು ನಿನ್ನನ್ನು ನಮ್ಮಿಂದ ದೂರ ಮಾಡೊಲ್ವೆ?

ಕಾಳಿ :- ದಿನಗಳೇನು? ವರ್ಷಗಳ ಅಂತರವೂ, ವಿಪರೀತವನ್ನು ವಿಪರೀತದಿಂದ ದೂರ ಮಾಡುವುದಿಲ್ಲ. ನಿನ್ನ ಪ್ರಶ್ನೆಯಾದ್ರೂ ಏನು ಹೇಳು? ನನಗೆ ಕೇಳ ಬೇಕನ್ನೋ ಕಾತರ ಹೆಚ್ಚಿದೆ.

[ವಿಲೋಮ ಕಾಳಿದಾಸನಿಗೆ ತುಂಬಾ ಹತ್ತಿರ ಬಂದು ಅವನ ಭುಜದ ಮೇಲೆ ಕೈಯಿಡುತ್ತಾನೆ]

ವಿಲೋಮ :- ನೀನು ಹಿಂದೆ ಇದ್ದ ಕಾಳೀದಾಸನೇ ಅಲ್ವೇ.... ಅನ್ನೋದ್ನ ತಿಳಿದ್ಕೊಳ್ಳೋಕೆ ಇಷ್ಟಪಡ್ತೇನೆ..... ಹೇಳು. ಹೌದೋ? ಅಲ್ಲವೋ?

[ಅರ್ಥಗರ್ಭಿತ ದೃಷ್ಟಿಯಿಂದ ಅಂಬಿಕಾಳ ಕಡೆ ನೋಡುವನು]

ಕಾಳಿ :- ನೀನು ಕೇಳುವುದರ ಅಭಿಪ್ರಾಯ ಅರ್ಥವಾಗಲಿಲ್ಲ.

[ಕಾಳಿದಾಸ ವಿಲೋಮನ ಕೈಗಳನ್ನು ನಿವಾರಿಸುತ್ತಾನೆ]

ವಿಲೋಮ :-ನಾನು ಕೇಳೋದಿಷ್ಟೆ! ನಿನ್ನೆವರೆಗೂ ಇದ್ದ ಕಾಳಿದಾಸನೇ ಹೌದಲ್ಲ, ನೀನು!

[ಮಲ್ಲಿಕಾ ಆವೇಶದಿಂದ, ಅಲ್ಲಿಗೆ ಬರುತ್ತಾಳೆ]

ಮಲ್ಲಿಕಾ :- ಆರ್ಯ ವಿಲೋಮರೇ..... ಇಂಥಾ ಅಸಂಬದ್ಧ ಪ್ರಶ್ನೆಗಳು ಅಕ್ಷಮ್ಯವೆನಿಸುತ್ತೆ.

ವಿಲೋಮ :- ಅಸಂಬದ್ಧವೇ?

[ಸುತ್ತಾಡುತ್ತಾ ಅಂಬಿಕಾಳ ಬಳಿ ಬರುವನು. ಕಾಳಿದಾಸ ಖಿನ್ನವದನನಾಗಿ ಒಂದೆರಡು ಹೆಜ್ಜೆ ಬೇರೆಡೆಗೆ ನಡೆಯುತ್ತಾನೆ.]

ಇದರಲ್ಲಿ ಅಸಂಬದ್ಧತೆಯೇನಿದೆ? ನಾನು ಸರಿಯಾದ್ದನ್ನೇ ಕೇಳ್ತಿದ್ದೇನೆ. ಹೌದಲ್ಲವಾ ಕಾಳಿದಾಸ? ನಾನು ಕೇಳೋದು ಸುಸಂಬದ್ಧವಾಗಿಲ್ಲ?.... ಹೌದಲ್ಲ ಅಂಬಿಕಾ?

[ಅಂಬಿಕಾ ಚಡಪಡಿಸುವ ಮನಸ್ಸಿನಿಂದ ಎದ್ದು ನಿಲ್ಲುತ್ತಾಳೆ.]

ಅಂಬಿಕಾ :- ಈ ವಿಷಯದಲ್ಲಿ ನನಗೆ ಏನೂ ತಿಳಿದಿಲ್ಲ. ತಿಳಿದುಕೊಳ್ಳೊ ಆಸೇನೂ ಇಲ್ಲ.

[ಒಳಗೆ ಹೋಗುವಳು]

ವಿಲೋಮ :- ನಿಲ್ಲು ಅಂಬಿಕಾ!

[ಅಂಬಿಕಾ ನಿಂತು, ಅವನೆಡೆ ನೋಡುವಳು]

ನೆನ್ನೇವರೆಗೂ ಕಾಳಿದಾಸ, ಮಲ್ಲಿಕಾರ ಸಂಬಂಧವನ್ನು ಕುರಿತು ಜನರಾಡಿ ಕೊಳ್ಳುತ್ತಿದ್ದುದು ಕೇಳಿಬಂತು.

[ಮಲ್ಲಿಕಾ ಮತ್ತೊಂದು ಹೆಜ್ಜೆ ಆವೇಶದಿಂದ ಮುಂದೆ ಬರುವಳು]

ಮಲ್ಲಿಕಾ :- ಆರ್ಯ ವಿಲೋಮರೆ.... ತಾವು!

ವಿಲೋಮ :- ಕಾಳಿದಾಸ ಇದ್ನೆಲ್ಲಾ ದೃಷ್ಟಿಯಲ್ಲಿಟ್ಟುಕೊಂಡು ಸ್ಪಷ್ಟವಾಗಿ ಹೇಳೋದು ಒಳ್ಳೇದಲ್ವೆ! ನೀನೊಬ್ಬನೆ ಉಜ್ಜಯಿನಿಗೆ ಹೋಗ್ತೀಯಾ ಅಥವಾ....

ಮಲ್ಲಿಕಾ :- ನಿಮ್ಮ ಈ ಪ್ರಶ್ನೆಗಳಿಗೆಲ್ಲಾ ಕಾಳಿದಾಸ ಉತ್ತರ ಕೊಡೊಲ್ಲ.

ವಿಲೋಮ :- ಉತ್ತರ ಕೊಡ್ತಾನಂತ ಯಾವಾಗ ಹೇಳಿದ್ದೀನಿ. ಅವನು ಕೊಡ್ದೆ ಇದ್ರೂ, ಅವ್ನ ಮನಸ್ಸಂತೂ ಕೊಡುತ್ತೇಂತನಿಸುತ್ತೆ, ಹೌದಲ್ಲವೇ ಕಾಳಿದಾಸ?

[ಕಾಳಿದಾಸ ಈ ಕಡೆ ತಿರುಗಲು ಒಬ್ಬರಿಗೊಬ್ಬರು ಎದುರಾಗುತ್ತಾರೆ]

ಕಾಳಿದಾಸ :- ನಿನ್ನ ಹೊಗಳಿಕೆಗೆ ಖಂಡಿತಾ ನಾನು ಬಾಧ್ಯನೇ, ಆದ್ರೆ ನೀನು ಬೇರೆಯವರ ಮನೆಗೇ ಅಲ್ಲ ಅವರ ಬದುಕಿನಲ್ಲಿ ಅಧಿಕಾರ ಇಲ್ಲದೆ ಪ್ರವೇಶ ಮಾಡ್ತೀ.

ವಿಲೋಮ :- ಅಧಿಕಾರ ಇಲ್ದೆ ಪ್ರವೇಶಾನೆ? ಏನಂಬಿಕಾ, ಬೇರೆಯವರ ಬದುಕಿನಲ್ಲಿ, ಅಧಿಕಾರ ಇಲ್ದೆ ಪ್ರವೇಶ ಮಾಡ್ತಿನಿ ಅನ್ನೋ ಕಾಳಿದಾಸನ ಈ ಆರೋಪ ಎಷ್ಟರ ಮಟ್ಟಿಗೆ ಸರೀಂತ ಕಾಣುತ್ತೆ ನಿನಗೆ?

ಅಂಬಿಕಾ :- ನಾನಾಗ್ಲೇ ಹೇಳ್ಬಿಟ್ಟಿದ್ದೇನೆ.... ಈ ವಿಷಯದಲ್ಲಿ ನನಗೇಳ ಬೇಕಾದ್ದಿಲ್ಲಾಂತ. (ಒಳಗೆ ಹೋಗುವಳು)

ವಿಲೋಮ:- ಓಹ್ ಹೊರಟೇ ಬಿಟ್ಲು? ಸರಿ ಕಾಳಿದಾಸ ನೀನೇ ಹೇಳು. ನೀನು ಹೇಳಿರೋ ಈ ಮಾತು ಎಷ್ಟರ ಮಟ್ಟಿಗೆ ಸರೀಂತ ಅನ್ನಿಸುತ್ತೆ ನಿಂಗೆ? ನಾನು ಯಾರ ಜೀವನದಲ್ಲಿ ಅಧಿಕಾರವಿಲ್ದೆ ಪ್ರವೇಶ ಮಾಡಿದ್ದೀನಿ? ನಡೀ ಹಳ್ಳೀಲೆಲ್ಲಾ ಯಾರನಾದ್ರೂ ಕೇಳೋಣ.

[ವ್ಯಂಗ್ಯವಾಗಿ ನೋಡುವನು. ಪಂಜಿನ ಬಳಿಗೆ ಹೋಗಿ ಅದನ್ನು ಕೈಗೆತ್ತಿಕೊಳ್ಳುವನು.]

ಹಾಗಾದ್ರೆ ನನ್ನ ಪ್ರಶ್ನೆಗೆ ಉತ್ತರ ಸಾಧ್ಯವಿಲ್ಲಾನ್ನು? ಹುಂ! ಪ್ರಶ್ನೇನೇ ಹಾಗಿರಬಹುದು?

ಕಾಳಿ :- ನೀನೇನು ಬೇಕಾದ್ರೂ ಊಹಿಸಬಹುದು. ಆದ್ರೆ ಈ ಹಳ್ಳಿ ಬಿಟ್ಟು ಉಜ್ಜಯಿನಿಗೆ ಹೋಗಲು ನನಗೆ ಸ್ವಲ್ಪವೂ ಇಷ್ಟವಿಲ್ಲ. ಇದೊಂದೇ ನಂಗೊತ್ತಿರೋದು.

ವಿಲೋಮ:– [ಪಂಜನ್ನು ಕಾಳಿದಾಸನ ಮುಖದ ಹತ್ತಿರಕ್ಕೆ ಇಡುತ್ತಾನೆ]

ವಿಲೋಮ:- ಹೌದೌದು! ಖಂಡಿತಾ! ನಿನ್ನಂಥಾವ್ರಿಗೆ ಇಂಥ ಆಸೆಯಾದ್ರೂ ಯಾಕೆ? ಬೇರೆ ಸಾಮಾನ್ಯನಿಗಾದ್ರೆ ಈ ಪ್ರಲೋಭನೆಗಳೆಲ್ಲಾ ಉಂಟು.

ಆದ್ರೆ ನನಗಿಷ್ಟು ಬೇಕಿತ್ತು, ನಿನಗೆ ಇಂಥಹ ಅವಕಾಶ ಸಿಕ್ಕಿ ಅದನ್ನು ಒಪ್ಪಿಕೊಂಡು ಹೋಗಲು ನಿಶ್ವಯಿಸುವುದಾದರೆ, ಹೀಗೆ ಮಾಡುವುದು ಒಳ್ಳೇದಲ್ವೆ? ನೀನು.....

[ಮಲ್ಲಿಕಾ ಇಬ್ಬರಿಗೂ ಮಧ್ಯೆ ಬರುವಳು. ಪಂಜಿನ ಬೆಳಕು ಅವಳ ಮುಖದ ಮೇಲೆ ಬೀಳುವುದು]

ಮಲ್ಲಿಕಾ :- ಆರ್ಯವಿಲೋಮರೇ, ತಮ್ಮ ಮಾತು ಮೇರೆ ಮಿಾರುತ್ತಿದೆ. ನಾನು ಇನ್ನೂ ಎಳೇ ಹುಡುಗಿಯಲ್ಲ. ನನಗೂ ನನ್ನ ಒಳಿತು ಕೆಡಕುಗಳನ್ನು ಕುರಿತು ವಿವೇಚಿಸೋ ಶಕ್ತಿಯಿದೆ. ಬೇಡದ ಅತಿಥಿಯಾಗಿ ತಾವು ಇಲ್ಲಿಗೆ ಬಂದಿರುವುದು ಬಹುಶಃ ತಾವೇ ಮರೆತಹಾಗಿದೆ.

ವಿಲೋಮ:- ಮರೆಯ ಬೇಕಂತಲೇ ನನಗನ್ನಿಸಲಿಲ್ಲ. ನನ್ನ ಕಂಡರೆ ನಿನಗೆ ದ್ವೇಷ ಅನ್ನೋದು ಗೊತ್ತೇ ಇದೆ. ನೀನು ದ್ವೇಷಿಸಿದ್ರೂ ನನಗೆ ನಿನ್ನ ಬಗ್ಗೆ ದ್ವೇಷವಿಲ್ಲ. ನಾನಿಲ್ಲಿಗೆ ಬರೋಕೆ ಇದಿಷ್ಟೇ ಕಾರಣ ಸಾಕಲ್ಲವೇ?

[ಪಂಜನ್ನು ಮತ್ತೆ ಕಾಳಿದಾಸನ ಬಳಿಗೆ ಒಯ್ಯುತ್ತಾನೆ]

ಕಾಳಿದಾಸನ ಹತ್ರ ನಾನೂ ಒಂದು ಮಾತಾಡ್ಬೇಕೆಂದಿದ್ದೆ?

[ಅರ್ಥಪೂರ್ಣವಾಗಿ ಕಾಳಿದಾಸನನ್ನು, ಮಲ್ಲಿಕಾಳನ್ನು ನೋಡುತ್ತಾನೆ]

ನೀನು ಕಾಳಿದಾಸನಿಗೆ ತುಂಬಾ ಹತ್ತಿರದವಳಾದರೂ, ನಿನಗಿಂತಲೂ, ನನಗೆ ಕಾಳಿದಾಸನ ವಿಷಯ ಚೆನ್ನಾಗಿ ಗೊತ್ತಿದೆ.

[ಒಬ್ಬೊಬ್ಬರ ಕಡೆಗೂ ನೋಡಿ ಬಾಗಿಲ ಕಡೆ ನಡೆಯುತ್ತಾನೆ. ಬಾಗಿಲ ಬಳಿಯಿಂದ ತಿರುಗಿ ಮತ್ತೊಮ್ಮೆ ಕಾಳಿದಾಸನ ಮೇಲೆ ದೃಷ್ಟಿ ಹಾಯಿಸುತ್ತಾನೆ.]

ಸುಖ ಪ್ರಯಾಣವಾಗಲೀ ಕಾಳಿದಾಸ! ಆದ್ರೆ ವಿಲೋಮನೂ ನಿನ್ನ ಶುಭ ಚಿಂತಕನೆಂಬುದನ್ನೂ ಮರೆಯಬೇಡ.

ಕಾಳಿ :- ಇದು ನನಗೆ ತಿಳಿದಿಲ್ಲವೇ?

[ವ್ಯಂಗ್ಯ ಮತ್ತು ತಿರಸ್ಕಾರ ಭರಿತ ನಗೆಯನ್ನು ನಗುತ್ತಾ ಮಲ್ಲಿಕಾಳ ಕಡೆ ನೋಡುವನು]

ವಿಲೋಮ:- ಬೇಡದ ಅತಿಥಿ ಇನ್ನೆಂದಾದ್ರೂ ಬಂದಾನು. ಅದಕ್ಕೆ ಈಗ್ಲೇ ಕ್ಷಮೆಯಿರಲಿ.

[ವ್ಯಂಗ್ಯವಾಗಿ ನಕ್ಕು ಹೊರಡುತ್ತಾನೆ. ಕಾಳಿದಾಸನು ಕ್ಷಣಕಾಲ ಮಲ್ಲಿಕಾಳ ಕಡೆ ನೋಡಿ

ಕಿಟಕಿಯ ಬಳಿ ಹೋಗುವನು]

ಮಲ್ಲಿಕಾ :- ಮತ್ತೆ ಬೇಸರ ಗೊಂಡೆಯಾ?

[ಕಿಟಕಿಯಿಂದ ಹೊರಗೆ ನೋಡುವನು]

ನೋಡು...... ನನಗೆ ಮಾತು ಕೊಟ್ಟಿದ್ದಿ.

[ಕೂಡಲೇ ಅವಳಲ್ಲಿಗೆ ಬರುವನು]

ಕಾಳಿ :- ಮಲ್ಲಿಕಾ, ಮತ್ತೊಮ್ಮೆ ಯೋಚಿಸು! ನನ್ನ ಮುಂದಿರೋದು ಕೇವಲ ರಾಜಾಶ್ರಯ, ಸನ್ಮಾನಗಳಲ್ಲ ಇದಕ್ಕಿಂತ ಹೆಚ್ಚಿನ ಸಮಸ್ಯೆಗಳಿವೆ ನನ್ಮುಂದೆ.

ಮಲ್ಲಿಕಾ :- ನಿನ್ಮುಂದಿರೋ ಆ ಸಮಸ್ಯೆ ನಾನೇ ಅಲ್ವೆ?

[ತೋಳು ಹಿಡಿದು ಆಸನದ ಮೇಲೆ ಕೂಡಿಸುವಳು]

ಇಲ್ಲಿ ಕೂತ್ಕೊ. ನನ್ನನ್ನ ತಿಳ್ಕೊಂಡಿದ್ದೀಯಲ್ವಾ?

[ಅವಳ ಕಡೆ ನೋಡುವನು]

ನಿನ್ನ ಮುಂದೆ ಬಂದಿರುವ ಸದವಕಾಶವನ್ನು ಕಳ್ಕೊಂಡು, ನೀನು ಇಲ್ಲೇ ಇರೋದ್ರಿಂದ ನನಗೆ ಸುಖ ಸಿಗುತ್ತೇಂತಲ್ಲವೇ ನಿನ್ನ ಭಾವನೆ?

[ಉಕ್ಕಿ ಬರುತ್ತಿರುವ ಕಂಬನಿಯನ್ನು ತಡೆದು ಕೊಳ್ಳಲು ಪ್ರಯತ್ನಿಸುತ್ತಾ ಮೇಲೆ ನೋಡುವಳು]

ನನಗ್ಗೊತ್ತು. ನಿನ್ನಗಲಿಕೆಯಿಂದ ನನ್ನ ಹೃದಯದೊಳಗೆ, ಹೊರಗೆ, ಎಲ್ಲಾ ಕಡೆಯೂ ಶೂನ್ಯತೆಯೇ ತುಂಬಿರುವುದೆಂದು. ಇಡೀ ಜಗತ್ತೇ ಶೂನ್ಯವಾಗಿ ಕಾಣುವುದಾದರೂ ನನ್ನನ್ನು ನಾನು ವಂಚಿಸಿಕೊಳ್ಳುತ್ತಿಲ್ಲ.

[ಮುಗುಳು ನಗಲು ಪ್ರಯತ್ನಿಸುತ್ತಾ ಅವನೆಡೆ ನೋಡುವಳು]

ನೀನು ಹೋಗಲೇ ಬೇಕೆಂದು, ನಾನು ಹೃದಯ ತುಂಬಿ ಹೇಳ್ತೇನೆ.

ಕಾಳಿ :- ನಿನ್ನ ಕಣ್ಣನ್ನು ನೀನು ಈಗ ನೋಡ್ಕೋಳ್ಳೋದಾದ್ರೆ.....

ಮಲ್ಲಿಕಾ :- ನನ್ನ ಮಾತನ್ನು ನೀನರ್ಥ ಮಾಡಿಕೊಂಡಿಲ್ಲಾಂತಲೇ ನನ್ನ ಕಣ್ಣು ಒದ್ದೆಯಾಗಿದೆ. ನೀನು ಇಲ್ಲಿಂದ ಹೋದರೂ ನನ್ನಿಂದ ದೂರವಾಗ ಬಲ್ಲೆಯಾ?..... ಈ ಹಳ್ಳಿ ಕೊಂಪೆಯಲ್ಲಿ ಬಿದ್ದು, ನಿನ್ನ ಪ್ರತಿಭೆಯನ್ನು ಅರಳಿಸಿಕೊಳ್ಳೋಕೆ ಅವಕಾಶವಾದರೂ ಎಲ್ಲಿ ಸಿಗುತ್ತೆ? ಇಲ್ಲಿನ ಜನರೂ ನಿನ್ನನ್ನು ಅರ್ಥ ಮಾಡಿಕೊಂಡಿಲ್ಲ. ಅವರ ಅಲ್ಪ ದೃಷ್ಟಿಯಿಂದಲೇ, ಸಾಧಾರಣ ಅಳತೆ ಗೋಲಿನಿಂದಲೇ ನಿನ್ನನ್ನ ಅಳೆಯಲು ಯತ್ನಿಸ್ತಾರೆ.

[ಮೊಣಕಾಲ ಮೇಲೆ ಗಲ್ಲವಿಟ್ಟು]

ನಾನು ನಿನ್ನನ್ನ ಅರ್ಥಮಾಡಿಕೊಂಡಿದ್ದೀನಿ. ಅನ್ನೋದ್ನ ನಂಬ್ತೀಯಲ್ಲ? ಏನಾದರೂ ದೌರ್ಬಲ್ಯ ಕವಿದರೆ, ಸಂಪೂರ್ಣ ದೌರ್ಬಲ್ಯಕ್ಕೆ ತುತ್ತಾಗ್ತೀ. ನಾನು ನಿನ್ನನ್ನು ಸುತ್ತುವರೆಯೋಕೆ ಇಷ್ಟ ಪಡೊಲ್ಲ. ಅದಕ್ಕೆ ನೀನು ಖಂಡಿತಾ ಹೋಗ್ಲೇಬೇಕೆಂದು ಹೇಳ್ತಿದ್ದೀನಿ.

ಕಾಳಿ :- ಮಲ್ಲಿಕಾ, ನನ್ನನ್ನ ಪೂರ್ತಿಯಾಗಿ ಅರ್ಥಮಾಡಿಕೊಂಡಿಲ್ಲ ನೀನು. ನಿನ್ನ ದೌರ್ಬಲ್ಯಕ್ಕೆ ಗುರಿಯಾಗ್ತೇನೆ ಅನ್ನೋದಲ್ಲ ನನ್ನ ಸಮಸ್ಯೆ.

[ಮಾತು ಇವಳನ್ನು ಚುಚ್ಚುವಂತಾದರೂ ಮೊದಲಿನ ಹಾಗೇ ಮುಖ ಮುದ್ರೆಯನ್ನು ತಾಳುತ್ತಾಳೆ. ಏನೋ ಯೋಚಿಸುವವನ ಹಾಗೆ, ಕಾಳಿದಾಸ ಎದ್ದು ಸುತ್ತಾಡುವನು]

ಈ ಹಳ್ಳಿ ನನ್ನ ಹುಟ್ಟೂರು. ಇಲ್ಲಿನ ಪ್ರತಿಯೊಂದು ವಸ್ತುವಿನ ಸೆಳವಿಗೂ ನಾನು ಸಿಲುಕಿದ್ದೇನೆ. ಇಲ್ಲಿನ ಸೆಳವಿನ ಸೂತ್ರಗಳಲ್ಲಿ ನೀನೂ ಇರುವೆ. ಈ ಆಕಾಶ, ಈ ಮುಗಿಲು ಇಲ್ಲಿನ ಹಸಿರು, ಮುಗ್ಧ ಮರಿ ಜಿಂಕೆಗಳು, ಪಶುಪಾಲಕರು ಎಲ್ಲವೂ!

[ತಡೆದು ಮಲ್ಲಿಕಾಳ ಕಡೆ ನೋಡುವನು]

ಇಲ್ಲಿಂದ ಹೋಗಿ, ನನ್ನ ಈ ಪ್ರೀತಿಯ ಪ್ರದೇಶದಿಂದ, ಇವೆಲ್ಲವುಗಳಿಂದಲೇ ವಂಚಿತನಾಗ್ತೇನೆ.

[ಮಣೆಯ ಮೇಲೆ ಮೊಣಕಾಲೂರಿ ಕೂಡುವಳು]

ಮಲ್ಲಿಕಾ :- ಇಲ್ಲಿಗಿಂತ ಹೆಚ್ಚಿನ ಹುಲುಸು ಪ್ರದೇಶ ದೊರೆಯುವುದೆಂದೇಕೆ ಯೋಚಿಸೊಲ್ಲ. ಈ ಪ್ರದೇಶದಿಂದ ನೀನು ಪಡೆಯ ಬಹುದಾದ ಮಣ್ಣಿನ ವಾಸನೆಯನ್ನೆಲ್ಲಾ ಪಡೆದಾಗಿದೆ. ನಿನ್ನ ವ್ಯಕ್ತಿತ್ವಕ್ಕೆ ಪೂರ್ಣತೆಯನ್ನು ಕೊಡಬಲ್ಲ ಹೊಸ ಭೂಮಿಯ ಅವಶ್ಯಕತೆಯಿದೆ ನಿನಗಿಂದು.

ಕಾಳಿ :- ಹೊಸ ಭೂಮಿ, ಹೆಚ್ಚಿನ ಸಾರ ನೀಡುವುದಕ್ಕೆ ಬದಲು ಇರುವುದನ್ನೇ ಹಿಂಗಿಸಿ, ಬತ್ತಿಸಿಬಿಟ್ಟರೆ?

[ಪುನಃ ಸುತ್ತಾಡುವನು]

ಮಲ್ಲಿಕಾ :- ಯಾವ ಭೂಮಿಯೂ ಕೋಮಲತೆಯ ಆರ್ದತೆಯಿಲ್ಲದೆ ಇರಲಾರದು. ನಿನ್ನ ಪ್ರತಿಭೆ ಪೃಥ್ವಿಯ ಆರ್ದ್ರತೆಯನ್ನು ಸ್ಪರ್ಶಿಸದೆ ಬಿಡಲಾರದು.

ಕಾಳಿ :- ಆ ಜೀವನಕ್ಕೆ ತಕ್ಕ ಅಪೇಕ್ಷೆಗಳೂ ಇರುತ್ತವೆ.....

[ಎದ್ದು ಹತ್ತಿರ ಬಂದು ಅವನ ಕೈಯನ್ನು ಹಿಡಿದುಕೊಳ್ಳುವಳು]

ಮಲ್ಲಿಕಾ :- ಅಪೇಕ್ಷೆಗಳಿದ್ದ ಮಾತ್ರಕ್ಕೆ ಅವುಗಳನ್ನೆಲಾ ತಣಿಸ ಬೇಕಾದುದರ ಅವಶ್ಯಕತೆಯೇನೂ ಇಲ್ಲವಲ್ಲ? ಬೇರೆಯವರಿಗಾಗಿ ನೀನು ನೂತನ ಬಯಕೆಗಳ ಸೃಷ್ಟಿ ಮಾಡಬಲ್ಲೆ.

ಕಾಳಿ :- ಆದರೂ, ಮನಸ್ಸಿನಲ್ಲಿ ಸಂಶಯಗಳು ತಲೆ ಹಾಕುತ್ತಲೇ ಇರುತ್ತವೆ. ನನಗಂತೂ ಇಲ್ಲಿ ಉತ್ಸಾಹವೇ ಇಲ್ಲದಾಗಿದೆ.

ಮಲ್ಲಿಕಾ :- ನನ್ನ ಕಡೆ ನೋಡು

[ಕೆಲ ಕ್ಷಣ ಮಲ್ಲಿಕಾಳ ಕಣ್ಣಲ್ಲಿ ಕಣ್ಣಿಟ್ಟು ನೋಡುವನು]

ಈಗಲೂ ನಡುವೆ ಬೆಳೆದು ಬಂದಿರುವ ಬಾಂಧವ್ಯದ ಬಳ್ಳಿಯನ್ನು ಕತ್ತರಿಸಲಾರೆ. ಇಲ್ಲಿನ ಗಾಳಿ ಮೋಡ, ಜಿಂಕೆ– ಎಲ್ಲವೂ ನಿನ್ನೊಂದಿಗೇ ಬರಲಿವೆ. ನಾನೂ ನಿನ್ನಿಂದ ದೂರವಿರಲಾರೆ. ನಿನ್ನ ನೆನಪಾದೊಡನೆ ಪರ್ವತ ಶಿಖರಗಳನ್ನೇರಿ ಅಲ್ಲಿಂದ ಹಾರಿ ಬರುವ ಮುಗಿಲುಗಳಲ್ಲಿ ಮೈ ಮರೆಯುತ್ತೇನೆ.

[ಮಿಂಚು ಗುಡುಗುಗಳು ಕೇಳಿಬರುವುವು]

ಮಳೇ ಬರೋಹಾಗಿದೆ. ಈಗಲೇ ತುಂಬಾ ಕತ್ತಲಾಗಿದೆ. ಆಚಾರ್ಯರೂ ನಿನ್ನ ದಾರಿ ನೋಡುತ್ತಿರಬಹುದು.

ಕಾಳಿ :- ಹೋಗಲೇಬೇಕೆಂದು ಹೇಳುವಿಯಾ?

ಮಲ್ಲಿಕಾ :- ಹೌದು. ನೋಡು..... ನೀನು ಹೋದರೆ ನನಗೂ ಸಂತೋಷ. ಎಲ್ಲಾ ಕಡೆ ಸುತ್ತಾಡುತ್ತೇನೆ. ದಿನವೂ ಸಂಜೆ ಜಗದಂಬಾ ಗುಡಿಗೆ ಸೂರ್ಯಸ್ತದ ಸೌಂದರ್ಯವನ್ನೂ ನೋಡಲು ಹೋಗುತ್ತೇನೆ.

ಕಾಳಿ :- ಹಾಗಂದ್ರೆ, ನಿನ್ನಿಂದ ದೂರ ಹೋಗ ಬೇಕೆಂದರ್ಥವೆ?

[ಚಿವುಟಿದಂತೆ, ಮಲ್ಲಿಕಾ ಏಳುವಳು]

ಮಲ್ಲಿಕಾ :- ಇಲ್ಲ ನಿನ್ನನ್ನು ಹೋಗಗೊಡಬೇಕಂದಲ್ಲ, ಹೋಗುತ್ತಿರುವುದರಿಂದ ನಿನ್ನ ದಾರಿ ಸುಖಪ್ರದವಾಗಲಿಯೆಂದು ಮಾತ್ರ ಪ್ರಾರ್ಥಿಸುತ್ತೇನೆ. ಹೊರಡು....

[ಕ್ಷಣಕಾಲ ಕಣ್ಮುಚ್ಚಿದ್ದು ಹೊರಡುವನು. ಮಲ್ಲಿಕಾ ಮುಖ ಮುಚ್ಚಿಕೊಂಡು, ಆಸನದ ಮೇಲೆ ಕೂಡುವಳು. ಗುಡುಗು ಜೋರಾಗಿ ಕೇಳಿಸುವುದು. ಮಲ್ಲಿಕಾ ಬಿಕ್ಕಿ ಬಿಕ್ಕಿ

ಅಳುವುದನ್ನು ಕೇಳಿ ಅಂಬಿಕಾ ಒಳಗಡೆಯಿಂದ ಬಂದು ತಲೆಯ ಮೇಲೆ ಕೈಯಿಡುವಳು. ಮಲ್ಲಿಕಾ ತಲೆ ಎತ್ತುತ್ತಾ]

ಅಂಬಿಕಾ :- ಮಲ್ಲಿಕಾ!

[ಮಲ್ಲಿಕಾ ಅಂಬಿಕಾಳ ಕಡೆ ನೋಡಿ ಕಿಟಕಿಯ ಬಳಿ ಹೋಗಿ ತಲೆಯಾನಿಸುವಳು]

ಅಂಬಿಕಾ :- ಮಲ್ಲಿಕಾ, ನಿನಗೆ ಮೈ ಸರಿಯಿಲ್ಲಾಂತ ಕಾಣುತ್ತೆ, ಒಳಗೆ ನಡೆದು ಸ್ವಲ್ಪ ವಿಶ್ರಾಂತಿ ತಗೊ. [ಅಳುವನ್ನು ತಡೆಯುವ ಪ್ರಯತ್ನ ಮಾಡುತ್ತಾ ಹಾಗೇ ನಿಂತಿರುವಳು]

ಮಲ್ಲಿಕಾ :- ಇಲ್ಲಾಮ್ಮ! ಇಲ್ಲೇ ಇರ್ತೀನಿ ಬಿಡು. ನೋಡು ಎಷ್ಟು ದಟ್ಟವಾಗಿ ಮೋಡಕವಿದಿದೆ. ಇವೇ ಮೋಡಗಳು ನಾಳೆ ಉಜ್ಜಯಿನಿ ಕಡೆ ಹಾರುತ್ತವೆ!!

[ಮುಖ ಮುಚ್ಚಿಕೊಂಡು ಮತ್ತೆ ಬಿಕ್ಕುವಳು. ಅಂಬಿಕಾ ಅವಳ ಬಳಿಗೆ ಬಂದು, ಅಪ್ಪಿಕೊಂಡು ಕೂಡುವಳು]

ಅಂಬಿಕಾ :- ಅಳಬೇಡ ಮಲ್ಲಿಕಾ!

ಮಲ್ಲಿಕಾ :- ಅಳ್ತಿಲ್ಲಮ್ಮಾ! ದುಃಖದ ಕಣ್ಣೀರಲ್ಲಾ ಇದು ಸುಖದ ಸಂಕೇತ! ಸುಖ....

[ಅಂಬಿಕಾಳ ವಕ್ಷದ ಮೇಲೆ ಮುಖ ಮುಚ್ಚಿಕೊಳ್ಳುವಳು. ಮತ್ತೆ ಗುಡುಗು ಕೇಳಿ ಬರುತ್ತದೆ. ಮಳೆಯ ಶಬ್ಧ ಕ್ರಮೇಣ ಜೋರಾಗುವುದು. ಬೆಳಕು ಕಡಿಮೆಯಾದಂತೆ ಪರದೆ ಬೀಳುವುದು]

* * *

## ಎರಡನೆ ಅಂಕ

**ಕೆಲವರ್ಷಗಳ ನಂತರ**

[ಪರದೆಯೆದ್ದ ಮೇಲೆ, ಅದೇ ಕೊಠಡಿ, ಹಿಂದಿನದಕ್ಕಿಂತ ಈಗ ಸ್ವಲ್ಪ ವ್ಯತ್ಯಾಸಗಳಾಗಿವೆ. ಸಾರಿಸಿದ ನೆಲ ಅಲ್ಲಲ್ಲಿ ಕಿತ್ತೇಳುತ್ತಿದೆ. ಕೆಂಮಣ್ಣಿನಿಂದ ಬಿಡಿಸಿದ್ದ ಸ್ವಸ್ತಿಕ, ಶಂಖ ಮತ್ತು ಕಮಲಗಳು ಬಣ್ಣ ಕಳೆದು ಕೊಂಡಂತಿವೆ. ಒಲೆಯ ಬಳಿ ಹಿಂದಿಗಿಂತ ಕಡಿಮೆ ಪಾತ್ರೆಗಳಿವೆ. ಎರಡೇ ಕೊಡಗಳು. ಅವುಗಳ ಮೇಲೆ ಬೂಸಲು ಕೂತಿದೆ. ಕಿಟಕಿಯ ಬಳಿಯಿರುವ ಆಸನದ ಮೇಲೆ, ಬರೆದಿರುವ ಭೂರ್ಜ ಪತ್ರಗಳು ಹರಡಿವೆ. ಕೆಲವನ್ನು ರೇಶಿಮೆಯ ಬಟ್ಟೆಯಿಂದ ಕಟ್ಟಿಡಲಾಗಿವೆ. ಆಸನದ ಬಳಿಯೇ ಒಂದು ಮುರಿದು ಬಿದ್ದಿರುವ ವ್ಯಾಸ ಪೀಠವಿದೆ. ಅದರ ಮೇಲೆ ಭೂರ್ಜ ಪತ್ರಗಳನ್ನು ಜೋಡಿಸಿ ಹೊಲಿದಿಟ್ಟಿರುವ ಗ್ರಂಥವೊಂದಿದೆ. ಒಲೆಯ ಬಳಿ ಒಂದು ಮೂಲೆಯಲ್ಲಿ ಕಟ್ಟಿರುವ ಹಗ್ಗದ ಮೇಲೆ ಕೆಲವು ಬಟ್ಟೆಗಳನ್ನು ಒಣಗ ಹಾಕಲಾಗಿದೆ. ಅವುಗಳಲ್ಲಿ ಹೆಚ್ಚು ಹರಿದಿರುವುದು, ಇಲ್ಲಾ ಬೇರೆ ಬೇರೆ ಬಣ್ಣದ ಬಟ್ಟೆಗಳಿಂದ ತೇಪೆ ಹಾಕಿದೆ. ಪ್ರವೇಶದ್ವಾರದ ಬಳಿ ಮುರಿದ ಮಣೆಯಿದೆ. ಒಂದು ಮಣೆಯ ಮೇಲೆ ಮಲ್ಲಿಕಾ ಕೂತು ಕಲ್ಲತ್ತಿನಲ್ಲಿ ಔಷಧವನ್ನು ಅರೆಯುತ್ತಿರುವಳು. ಒಳಗಿನ ಕೋಣೆಯಲ್ಲಿ ಹಾಸಿರುವ ಹಾಸಿಗೆಯ ತುದಿ ಮೊದಲಿನ ಹಾಗೇ ಕಾಣುತ್ತಿದೆ. ಅಂಬಿಕಾ ಹಾಸಿಗೆಯ ಮೇಲೆ ಮಲಗಿ, ಆಗಾಗ ಮಗ್ಗುಲು ತಿರುಗುತ್ತಿರುವಳು. ಹೊರಗಿನಿಂದ ನಿಕ್ಷೇಪನ ಪ್ರವೇಶ. ಮಲ್ಲಿಕಾ ಅರೆಯುವುದನ್ನು ನಿಲ್ಲಿಸಿ ಸೆರಗನ್ನು ಸರಿಯಾಗಿ ಹೊದ್ದು ಕೊಳ್ಳುವಳು.]

ನಿಕ್ಷೇಪ :- ಈಗ ಹೇಗಿದೆ ಅಂಬಿಕಾಗೆ?

ಮಲ್ಲಿಕಾ :- ಜ್ವರ ಇನ್ನೂ ಹಾಗೆ ಇದೆ.

ನಿಕ್ಷೇಪ :- ಸ್ವಲ್ಪಾನೂ ಇಳಿದಿಲ್ಲ ಜ್ವರ?

ಮಲ್ಲಿಕಾ :- ಗೊತ್ತಾಗ್ತಿಲ್ಲ.

ನಿಕ್ಷೇಪ :- ಅಬ್ಬ! ಒಂದೇ ಸಮನೆ ಎರಡು ವರ್ಷ ಜ್ವರ !!

[ಮಲ್ಲಿಕಾ ನಿಟ್ಟುಸಿರಿಟ್ಟು, ಅರೆದ ಔಷಧವನ್ನು ಒಂದು ಕಲ್ಲಿನ ಬಟ್ಟಲಿಗೆ ಹಾಕಿಕೊಳ್ಳುವಳು. ನಿಕ್ಷೇಪ ಬಾಗಿಲಿನ ಬಳಿ ಇರುವ ಮಣೆಯನ್ನೆಳೆದು ಕೊಂಡು ಕೂಡುವನು.]

ಇದನ್ನೋಡಿದ್ರೆ. ಅಂಬಿಕಾ ತುಂಬಾ ಇಲ್ಲದ ಯೋಚನೆ ಇಟ್ಟು ಕೊಂಡಿದ್ದಾಳೇಂತ ಅನ್ನಿಸುತ್ತೆ.

ಮಲ್ಲಿಕಾ :- ಔಷಧೀನೂ ಸರಿಯಾಗಿ ತೆಗೆದ್ಕೊಳ್ತಿಲ್ಲ.

[ಔಷಧಿಗೆ ಹಾಲು ಜೇನನ್ನು ಬೆರಸುತ್ತಾಳೆ]

ನಿಕ್ಷೇಪ :- ನೀನು ಹೇಗಿದ್ದಿ?

ಮಲ್ಲಿಕಾ :- ಏನಿಲ್ಲ ಚೆನ್ನಾಗಿದ್ದೀನಿ.

ನಿಕ್ಷೇಪ :- ತುಂಬಾ ಇಳಿದ್ಹೋಗಿದ್ದಿ.... ತುಂಬಾ ದಿನದಿಂದ ರಾಜಧಾನಿಕಡೆಯಿಂದ ಯಾರೂ ಬಂದಿಲ್ಲ.

[ಕಣ್ಣು ತಪ್ಪಿಸಿ ತತ್ತರತೆಯಿಂದ ಔಷಧವನ್ನು ಬೆರೆಸಿ ಕಲಸುತ್ತಾಳೆ]

ಉಜ್ಜಯನೀ ಕಡೇಗಾದ್ರೂ ಹೋಗ್ಬರೋಣಾಂತ ಎಷ್ಟೋಸಾರಿ ಯೋಚಿಸ್ತಿದ್ದೀನಿ.

ಮಲ್ಲಿಕಾ :- ಯಾಕೆ?

ನಿಕ್ಷೇಪ :- ತುಂಬಾ ಮಾತಾಡ್ಬೇಕಿದೆ. ಕೆಲವು ಸಾರಿ ಇದರಲ್ಲಿ ನಂದೂ ತಪ್ಪಿದೇಂತಲೇ ಅನ್ನುತ್ತೆ.

[ಆಶ್ಚರ್ಯದಿಂದ ಅವನ ಕಡೆ ನೋಡುತ್ತಾಳೆ]

ಮಲ್ಲಿಕಾ :- ಯಾವ ವಿಷಯದಲ್ಲಿ? [ನಿಕ್ಷೇಪ ನಿಟ್ಟುಸಿರು ಬಿಡುವನು]

ನಿಕ್ಷೇಪ :- ವಿಷಯ ಏನೂನ್ನೋದು ನಿಂಗೂ ಗೊತ್ತಿದೆ. ಕಾಳಿದಾಸ ಅಲ್ಲಿಗೆ ಹೋಗಿ, ನಮ್ಮನ್ನೆಲ್ಲಾ ಹೀಗೆ ಮರೆತು ಬಿಡ್ತಾರೇಂತ ಅನ್ಕೊಂಡಿರಲಿಲ್ಲ.

ಮಲ್ಲಿಕಾ :- ಅವ್ರು ಅಲ್ಲಿಗೆ ಹೋಗಿ ಇಷ್ಟೊಂದು ಕಾರ್ಯ ಮಗ್ನರಾಗಿರೋದು ನೋಡಿನನಗೇನೋ ಸಂತೋಷವೇ ಆಗಿದೆ. ಇಲ್ಲಿದ್ದು ಬರೆದದ್ದು 'ಋತು ಸಂಹಾರ' ಕಾವ್ಯವೊಂದನ್ನೆ. ಆದ್ರೆ ಅಲ್ಲಿಗೆ ಹೋದ ಮೇಲೆ ಎಷ್ಟೋ ಹೊಸ ಕಾವ್ಯಗಳನ್ನು ಬರೆದಿದ್ದಾರೆ. ಎರಡು ವರ್ಷದ ಹಿಂದೆ ಈ ಕಡೆ ಬಂದಿದ್ದ ವ್ಯಾಪಾರಿಗಳು ನನಗೆ 'ಕುಮಾರ ಸಂಭವ' 'ಮೇಘದೂತ' ಕಾವ್ಯಗಳ ಪ್ರತಿಗಳನ್ನು ತಂದುಕೊಟ್ಟು ಹೋದ್ರು, ಅಲ್ಲಿ ಇವರ ಇನ್ನೊಂದು ಬೃಹತ್ ಕಾವ್ಯದ ಬಗ್ಗೆ ಚರ್ಚೆ ನಡೀತಿದೆ. ಆದ್ರೆ ಅದರ ಪ್ರತಿ ಸಿಕ್ಕಿಲಾಂತ್ಲೂ ಅವರು ಹೇಳ್ತಿದ್ದರು.

ನಿಕ್ಷೇಪ :- ಹಾಗಂತ್ಲೇ ನಾನೂ ಕೇಳಿದ್ದೇನೆ. ಇತ್ತೀಚೆಗೆ ಒಂದೆರಡು ನಾಟಕಗಳನ್ನು ಬರೆದಿದ್ದಾರಂತೆ. ಉಜ್ಜಯಿನಿಯ ರಂಗ ಶಾಲೆಯಲ್ಲಿ ಅವುಗಳ ಅಭಿನಯವೂ ನಡೀತಂತೆ. ಆದ್ರೂ....

ಮಲ್ಲಿಕಾ :- ಆದ್ರೂ...ಏನೂ?

ನಿಕ್ಷೇಪ :- ನನಗಂತೂ ತುಂಬಾ ದುಃಖವಾಗ್ತಿದೆ. ಇದೇ ವ್ಯಾಪಾರಿಗಳಿಂದಲೇ ಇನ್ನೂ ಅನೇಕ ಮಾತುಗಳ್ನ ಕೇಳಿದ್ದೆ...

ಮಲ್ಲಿಕಾ :- ಯಾರಾದ್ರೂ, ಏನಾದ್ರೂ ಒಳ್ಳೇ ಹೆಸರು ಸಂಪಾದಿಸಿದ್ರೂಂದ್ರೆ ಅದರ ಜೊತೆಗೇ ಏನಾದ್ರೂ ಅಪವಾದ ತಲೆಗೆ ಕಟ್ಟಿಯೇ ಇರ್ತಾರೆ.

ನಿಕ್ಷೇಪ :- ಅಪವಾದದ ಮಾತಲ್ಲ ನಾನು ಹೇಳ್ತಿರೋದು....

[ಎದ್ದು ಓಡಾಡುವನು]

ಗುಪ್ತವಂಶದ ಕನ್ಯೆಯೊಡನೆ ಅವ್ರ ಮದುವೇನೂ ಆಗಿದೇಂತ ಕೇಳಿದೆ....

ಮಲ್ಲಿಕಾ :- ಅದರಲ್ಲಿ ತಪ್ಪೇನಿದೆ?

ನಿಕ್ಷೇಪ :- ಒಂದು ದೃಷ್ಟಿಯಿಂದ ತಪ್ಪಿನ ಹಾಗೆ ಕಾಣ್ದೇ ಇದ್ರೂ, ಇಲ್ಲಿದ್ದಾಗ 'ನಾನು ಸಾಯೋವರೆಗೂ ಮದುವೆಯಾಗೊಲ್ಲಾ; ಅನ್ನೊ ಹಟ ಇತ್ತಲ್ಲ....

[ಮಲ್ಲಿಕಾಳ ಕಡೆ ನೋಡುವನು]

ಆ ಹಟ ಏನಾಯ್ತು, ಅವರಿಗೆ ಗೊತ್ತಾಗ್ಲಿಲ್ಲ, ಈ ಹಟಾನ ಉಳಿಸೋಕೇಂತ ನೀನು....

ಮಲ್ಲಿಕಾ :- ಅವರ ವಿಷಯದಲ್ಲಿ ನನ್ನ ಪ್ರಸ್ತಾಪ ಯ್ಯಾಕೆ? ನಾನೋ ಅಲ್ಪಳು. ಸಾಧಾರಣ ಪ್ರಾಣಿಗಳಲ್ಲಿ ಒಬ್ಬಳು. ಅವರು ಅಸಾಧಾರಣರು. ಅಂತಹ ಅಸಾಧಾರಣರಿಗೆ ಅಸಾಧಾರಣ ಸಂಬಂಧವೇ ಸರಿಯಲ್ಲವೇ?.... ಅಲ್ದೆ ರಾಜಕುಮಾರಿ ಬಹುದೊಡ್ಡ ವಿಮರ್ಶಕಿ ಅಂತ್ಲೂ ಕೇಳಿದ್ದೆ.

ನಿಕ್ಷೇಪ :- ಹೌದು ನಾನೂ ಕೇಳಿದ್ದೆ. ಶಾಸ್ತ್ರ ದರ್ಶನಾದಿಗಳನ್ನೆಲ್ಲಾ ಓದಿ ತಿಳ್ಕೊಂಡಿದ್ದಾಳಂತೆ. ಅದಕ್ಕೇ ಹೇಳಿಲ್ಲವೇ, ಒಂದು ರೀತಿಯಲ್ಲಿ ತಪ್ಪಿಲ್ಲಾಂತ! ಆದರೆ ಇನ್ನೊಂದು ದೃಷ್ಟಿಯಿಂದ ನೋಡಿದ್ರೆ ಇದು ತುಂಬಾ ಶೋಚನೀಯ!

ಮಲ್ಲಿಕಾ :- ಈಗಂತೂ ನನಗೆ ನನ್ನಲ್ಲಿಯೇ ದುಃಖವಾಗ್ತಿದೆ. ಇಷ್ಟು ದಿವಸ ಅವರ ಪ್ರಗತಿ ಪಥಕ್ಕೆ ನಾನು ಅಡ್ಡಿಯಾಗಿದ್ದುದಲ್ಲದೆ ಈಗಲೂ ಅಡ್ಡಿಯಾಗುತ್ತಿದೆ.

ತಮ್ಮ ಉಪಾಯದಂತೆ ಈಗ ಅವರು ಹೋಗೋಹಾಗೆ ಮಾಡದಿದ್ದರೆ ತುಂಬಾ ನಷ್ಟವಾಗ್ತಿತ್ತು!

ನಿಕ್ಷೇಪ :- ಅದೇ ನಾನೂ ಯೋಚಿಸ್ತಿರೋದು. ನನ್ನ ಮಾತನ್ನು ಕೇಳದಿದ್ದರೆ ಅವರು ಹೋಗ್ತಾಲೂ ಇರಲಿಲ್ಲ, ನಿನಗೆ ಈ ಕಷ್ಟಾನೂ ಇರ್ತಿರ್ಲಿಲ್ಲ.

ಮಲ್ಲಿಕಾ :- ಈಗಲೂ ನನಗೆ ಯಾವ ಕಷ್ಟವೂ ಇಲ್ಲ. ಮೊದ್ಲು ಅಮ್ಮ ಕೆಲ್ಸ ಮಾಡ್ತಿದ್ಲು. ಈಗ ಖಾಯಿಲೆ ಇರೋದ್ರಿಂದ ನಾನು ಮಾಡ್ತೀನಿ. ಅಷ್ಟೇ ವ್ಯತ್ಯಾಸ. [ಔಷಧಿಯನ್ನು ಹಿಡಿದು ನಿಲ್ಲುವಳು] ಬಂದೆ, ಅಮ್ಮನಿಗೆ ಔಷಧಿ ಕೊಟ್ಟು ಬರ್ತೇನೆ.

[ಒಳಗೆ ಹೋಗುವಳು, ಅಂಬಿಕಾಳನ್ನು ಮೆಲ್ಲನೆ ಎಬ್ಬಿಸಿ ಔಷಧ ಕುಡಿಸುವಳು. ಕಹಿಯ ಅನುಭವದಿಂದ ಮುಖ ಕಿವುಚುವಳು]

[ನಿಕ್ಷೇಪ ಕಿಟಕಿಯ ಬಳಿಸುತ್ತಾಡುತ್ತಾ ಹೋಗುವನು. ಹೊರಗಡೆ ಕುದುರೆ ಗೊರಸಿನ ಶಬ್ಧ ಕೇಳಿಬರುವುದು. ಹತ್ತಿರ ಬಂದಂತಾಗಿ ದೂರದಲ್ಲಿ ಕ್ಷೀಣವಾಗುವುದು. ನಿಕ್ಷೇಪ ಕಿಟಕಿಗೆ ಮುಖ ಕೊಟ್ಟು ನೋಡುತ್ತಿರುವನು ಅಂಬಿಕಾ ಔಷಧಿ ಕುಡಿದು ಮಲಗುತ್ತಾಳೆ. ಮಲ್ಲಿಕಾ ಬಟ್ಟಲು ಹಿಡಿದು ಹೊರಗೆ ಬರುತ್ತಾಳೆ ಮತ್ತು ಮಲಗುವಳು. ಬಾಗಿಲು ಹಿಡಿದು ಅಂಬಿಕಾಳ ಕಡೆ ಒಮ್ಮೆ ನೋಡುವಳು.]

–ಛಳಿ ಆಗೋದಾದ್ರೆ ಬಾಗಿಲು ಹಾಕಲೇನಮ್ಮಾ

[ತಲೆಯಾಡಿಸುವಳು ಬಾಗಿಲನ್ನು ಮುಚ್ಚಿ ಬಟ್ಟಲನ್ನು ತಂದು ಒಲೆಯ ಬಳಿ ಇಡುವಳು. ಮೊದಲೇ ಒಂದೆರಡು ಮುಸುರೆ ಪಾತ್ರೆಗಳು ಬಿದ್ದಿರುತ್ತವೆ. ನಿಕ್ಷೇಪ ಕಿಟಕಿಯನ್ನು ಬಿಟ್ಟು ಈ ಕಡೆಗೆ ಬರುವನು]

ನಿಕ್ಷೇಪ :- ಹೊರಗಿನವರು ಯಾರೋ ಬಂದಂತಿದೆ.

ಮಲ್ಲಿಕಾ :- ಯಾರು?

ನಿಕ್ಷೇಪ :- ರಾಜನ ಕಡೆಯವರಿರಬಹುದು. ಕಾಳಿದಾಸನನ್ನು ಕರೆದೊಯ್ಯುವಾಗ ಬಂದಿದ್ದ ಇಬ್ಬರು ವ್ಯಕ್ತಿಗಳಂತೇ ಇದ್ದಾರೆ.

[ಮಲ್ಲಿಕಾ ಸ್ವಲ್ಪ ಕಂಪಿಸುವಳು.]

ಮಲ್ಲಿಕಾ :- ಅದೇ ವ್ಯಕ್ತಿಗಳೇ?

[ತನ್ನ ಭಾವನೆಗಳನ್ನು ತುಳಿದು ನಗಲು ಪ್ರಯತ್ನಿಸುವಳು]

ಇವರ ವಿಷಯದಲ್ಲಿ ಅಮ್ಮ ಏನ್ಹೇಳ್ತಿದ್ಲು ಗೊತ್ತೇನು? ಅವಳು ಹೇಳ್ತಾಳೆ

ಇಂಥಾ ವ್ಯಕ್ತಿಗಳು ಕಂಡು ಬಂದಾಗ ಏನಾದ್ರೂ ಕೆಟ್ಟದ್ದಾಗುತ್ತೇಂತ. ಆದ್ರೆ ಹಿಂದಿನ ಸಲ ಏನೂ ಆಗ್ಲಿಲ್ಲ.

ನಿಕ್ಷೇಪ :- ಏನೂ ಆಗ್ಲಿಲ್ಲವೇ?

[ಮಲ್ಲಿಕಾ ಅವನ ಕಣ್ಣು ತಪ್ಪಿಸಿ ಒದ್ದೆ ಬಟ್ಟೆಗಳ ಕಡೆ ನೋಡುವಳು]

ಮಲ್ಲಿಕಾ :- ಏನಾಯ್ತು? ಏನಾದ್ರೂ ಆಯ್ತಂದ್ರೆ ಒಳ್ಳೇದೇ ಆಗಿತ್ತು.

[ಒಂದೆರಡು ಬಟ್ಟೆ ತೆಗೆದು ನೋಡಿ ಹಗ್ಗದ ಮೇಲೆ ಹರಹುವಳು]

ಇತ್ತೀಚೆಗಂತೂ ಹಾಳಾದ್ದು ಬಟ್ಟೇನೇ ಒಣಗೊಲ್ಲ ಬೇಗ.

[ಮತ್ತೆ ಗೊರಸಿನ ಶಬ್ಧ. ನಿಕ್ಷೇಪ ಬೇಗನೆ ಕಿಟಕಿಯ ಬಳಿಗೆ ಹೋಗುವನು. ಅಕಸ್ಮಾತ್ತಾಗಿ ಅವನ ಬಾಯಿಂದ ಆಶ್ಚರ್ಯದ ಉದ್ಗಾರ ಹೊರಡುತ್ತದೆ]

ನಿಕ್ಷೇಪ :- ಏ..... ಏ....! ಇಲ್ಲ... ಹೇಗಿಲ್ಲ...?

[ಗೊರಸಿನ ಶಬ್ದ ಕ್ಷೀಣವಾಗುತ್ತದೆ. ನಿಕ್ಷೇಪ ಉದ್ವಿಗ್ನನಂತೆ ಕಿಟಕಿ ಬಿಟ್ಟು ಬರುವನು ಮಲ್ಲಿಕಾ ಅವನ ಕಡೆ ನೋಡುವಳು]

ಮಲ್ಲಿಕಾ :- ಇದ್ದಕ್ಕಿದ್ದಾಗೆ ಇಷ್ಟೇಕೆ ಉದ್ವಿಗ್ನರಾದಿರಿ ನಿಕ್ಷೇಪರೆ?

ನಿಕ್ಷೇಪ :- ನಾನೊಂದು ಪರಿಚಿತ ವ್ಯಕ್ತಿಯ ಮುಖ ಕಂಡೆ ಕುದುರೆ ಮೇಲೇರಿ ಹೋಗೋದನ್ನ ಕಂಡೆ.

ಮಲ್ಲಿಕಾ :- ಕಂಡರೇನಾಯಿತು? ತಾವೂ ಅಮ್ಮನ ಹಾಗೇ ಏನಾದರೂ ಕೆಟ್ಟದ್ದಾದೀತೂಂತ ಯೋಚಿಸ್ತಿರೋ ಹಾಗಿದೆ.

ನಿಕ್ಷೇಪ :- ಮಲ್ಲಿಕಾ ಆ ವ್ಯಕ್ತಿಯ ಮುಖ ನನಗೆ ತೀರಾ ಪರಿಚಿತವಾದುದು.

ಮಲ್ಲಿಕಾ :- ಪರಿಚಿತ ಮುಖವೇ?

ನಿಕ್ಷೇಪ :- ಅವರು ಕಾಳಿದಾಸರೇಂತ ನನಗನ್ನಿಸುತ್ತಿದೆ.

[ಮಲ್ಲಿಕಾ ಕೈಯಲ್ಲಿ ಬಟ್ಟೆ ಹಿಡಿದು ಸ್ತಂಭಿತಳಂತೆ ನಿಲ್ಲುವಳು. ದನಿ ಅತಿದುರ್ಬಲವಾಗುವುದು]

ಮಲ್ಲಿಕಾ :- ಕಾಳಿದಾಸ!.... ಇದ್ಹೇಗೆ ಸಾಧ್ಯ?

ನಿಕ್ಷೇಪ :- ನಾನು ಕಣ್ಣಾರೆ ಕಂಡಿದ್ದೀನಿ. ಕುದುರೆಯೋಡಿಸ್ತಾ ಪರ್ವತ ಶಿಖರದ ಕಡೆಗೆ ನಡೆದು ಹೋದ್ರು. ರಾಜೋಚಿತ ತೊಡುಗೆಯಲ್ಲಿ ಯಾರಿಗೂ ಗುರುತು ಸಿಗದಿದ್ದರೂ ನಿಕ್ಷೇಪನ ಕಣ್ಣನ್ನು ವಂಚಿಸಲಾಗುವುದಿಲ್ಲ.... ಈಗಲೇ ಹೋಗಿ ನೋಡ್ತೇನೆ. ಆ ರಾಜಾಧಿಕಾರಿಗಳೂ ಅವರೊಂದಿಗೇ ಬಂದಿರಬೇಕು.

[ಅದೇ ಉದ್ವಿಗ್ನತೆಯಿಂದ ಹೊರಗೆ ಹೊರಡುವನು]

ಮಲ್ಲಿಕಾ :- ಅವ್ರು ಒಂದು ಪರ್ವತ ಶಿಖರದ ಕಡೆಗೆ ಹೊರಟರೇ?

[ಬೆರಳು ಕಚ್ಚಿ ನೋವನ್ನನುಭವಿಸುತ್ತಾ ಯಂತ್ರ ಚಾಲಿತಳಂತೆ ಕಿಟಕಿಯನ್ನು ಸಮೀಪಿಸುವಳು. ರಂಗಿಣಿ, ಸಂಗಿಣಿಯರ ಪ್ರವೇಶ, ನೂಪುರ ಧ್ವನಿಯಿಂದ ಚಕಿತಳಾಗಿ ಆ ಕಡೆ ನೋಡುವಳು ಮಲ್ಲಿಕಾ. ರಂಗಿಣಿ ಸಂಗಿಣಿಯನ್ನು ಮುಂದಕ್ಕೆ ತಳ್ಳುತ್ತಾ]

ರಂಗಿಣಿ :- ಒಳಗೆ ಬರಬಹುದೇಂತ ಕೇಳು ಇವರನ್ನ?

[ಸಂಗಿಣಿ ಅವಳನ್ನೇ ಮುಂದು ಮಾಡಿ ತಾನು ಹಿಂದೆ ಸರಿಯುವಳು]

ಸಂಗಿಣಿ :- ನೀನೇ ಕೇಳು.

[ಮಲ್ಲಿಕಾ ಕಿಟಕಿಯನ್ನು ಬಿಟ್ಟು ಅವರ ಬಳಿಗೆ ಬರುವಳು]

ರಂಗಿಣಿ :- ಸರಿ ನಾನೇ ಕೇಳ್ತೇನೆ... ನೋಡಿ. ಇದು ತಮ್ಮ ಮನೆಯೇ ತಾನೆ?

ಮಲ್ಲಿಕಾ :- ಹೌದೌದು... ಬನ್ನಿ... ತಾವು ನಮ್ಮಲ್ಲಿಗೇ ಬಂದಿರುವಿರಾ.

[ಸಂಗಿಣಿ ರಂಗಿಣಿಯರ ಪ್ರವೇಶ. ಕುತೂಹಲದಿಂದ ಎಲ್ಲಾ ಕಡೆ ನೋಡುವರು]

ರಂಗಿಣಿ :- ನಾವು ವಿಶೇಷವಾಗಿ, ಇಂಥಾವ್ರ ಮನೇಗೇಂತ ಯಾರ ಮನೆಗೂ ಬಂದಿಲ್ಲ. ಇಲ್ಲಿನ ಗ್ರಾಮಾನೆಲ್ಲಾ ನೋಡ್ತಾ ಸುತ್ತಾಡ್ತಾ ಬಂದಿವೀಂತ ಭಾವಿಸಬಹುದು.

ಸಂಗಿಣಿ :- ಇಲ್ಲಿನ ಮನೆಗಳ್ನ ನೋಡ ಬಯಸ್ತೇವೆ.

ರಂಗಿಣಿ :- ಇಲ್ಲಿನ ಜೀವನವನ್ನೂ ತಿಳಿಕೊಳ್ಳೋಕೆ ಇಷ್ಟ ಪಡ್ತೇವೆ.

ಸಂಗಿಣಿ :- ಮೊದ್ಲು ನಮ್ಮ ಪರಿಚಯ ಮಾಡಿ ಕೊಡ್ತೇವೆ. ಇವರು ಶುಭಶ್ರೀ ರಂಗಿಣೀಂತ ಉಜ್ಜಯನಿಯ ಪ್ರಮುಖ ನೃತ್ಯ ಶಾಲೆಯಲ್ಲಿ ನೃತ್ಯಾಭ್ಯಾಸ ಮಾಡುತ್ತಿರುವರು. ನಾಟಕ ರಚನೆಯಲ್ಲಿಯೂ ತುಂಬಾ ಅಭಿರುಚಿಯಿದೆ.

ರಂಗಿಣಿ :- ಇವರು 'ಸಂಗಿಣಿ' ಅಂತ, ಅದೇ ನೃತ್ಯ ಶಾಲೆಯಲ್ಲಿ ವೀಣಾ, ಮೃದಂಗ ವಾದನದ ಅಭ್ಯಾಸ ಮಾಡುತ್ತಿರುವರು. ಸುಂದರವಾದ ಪ್ರಣಯಗೀತೆಗಳನ್ನು ಕೂಡಾ ಬರೆಯುತ್ತಾರೆ. ಈಗೀಗ ಗದ್ಯದ ಕಡೆಗೆ ಇವರ ಮನಸ್ಸು ಒಲಿದಿದೆ.... ತಾವು....

[ಉತ್ಸುಕತೆಯಿಂದ ಮಲ್ಲಿಕಾಳ ಕಡೆ ನೋಡುವರು. ಮಲ್ಲಿಕಾ ಚಕಿತಳಾದಂತೆ ನಿಲ್ಲುವಳು]

ಸಂಗಿಣಿ :- ತಮ್ಮ ಪರಿಚಯ ತಿಳಿಯಲಿಲ್ಲ.

ಮಲ್ಲಿಕಾ :- ನನ್ನ ಪರಿಚಯವೇನೂ ಇಲ್ಲ. ತಾ... ತಾವು ಈ ಆಸನದ ಮೇಲೆ ಕುಳಿತುಕೊಳ್ಬಹುದಲ್ಲ?

ಸಂಗಿಣಿ :- ನಾವು ಕುಳಿತುಕೊಳ್ಳಬಂದಿಲ್ಲ. ಕೇವಲ ಇಲ್ಲಿನ ಸಂಸ್ಕೃತಿಯನ್ನು ಅಧ್ಯಯನ ಮಾಡಲು ಬಂದಿದ್ದೇವೆ. ಇಲ್ಲಿ ಇದನ್ನು ಏನೆಂದು ಕರೆಯುತ್ತಾರೆ.

ಮಲ್ಲಿಕಾ :- ಇದನ್ನೂಂದ್ರೆ?

ರಂಗಿಣಿ :- ಇವರ ಅಭಿಪ್ರಾಯ ನಾವು ಈಗ ನಿಂತಿದ್ದೇವಲ್ಲ. ಈ ಎಲ್ಲಾ ಸ್ಥಳಗಳನ್ನು ಏನೆಂದು ಕರೀತೀರಿ? ಉಜ್ಜಯಿನಿಯಲ್ಲಿ ಇದನ್ನು ಪ್ರಕೋಷ್ಠವೆನ್ನುತ್ತಾರೆ. ಇಲ್ಲಿ ಇದನ್ನೇ ಏನಂತಾರೆ?

ಮಲ್ಲಿಕಾ :- ಪ್ರಕೋಷ್ಠ

ರಂಗಿಣಿ :- ಪ್ರಕೋಷ್ಠವನ್ನು, ಪ್ರಕೋಷ್ಠವೆಂತಲೇ ಕರೀತಾರಾ?
ಮತ್ತು....
[ಕೊಡಗಳ ಬಳಿ ನಡೆದು ಬಂದ ಕೊಡವನ್ನು ತೋರಿಸುತ್ತಾ]
ಇದನ್ನು

ಮಲ್ಲಿಕಾ :- ಕುಂಭ

ರಂಗಿಣಿ :- ಪ್ರಕೋಷ್ಠವನ್ನು ಪ್ರಕೋಷ್ಠ, ಕುಂಭವನ್ನು ಕುಂಭ?
[ನಿರಾಶೆಯಿಂದ ಭುಜವಿಳಿಸುವಳು]

ಸಂಗಿಣಿ :- ನೋಡಿ, ಇಲ್ಲಿನ ಕೆಲವು ಸ್ಥಳೀಯ ಪದಗಳನ್ನು ಹೇಳಿ.

ಮಲ್ಲಿಕಾ :- ಸ್ಥಳೀಯ ಪದ?

ಸಂಗಿಣಿ :- ಅದೇ ಪತಂಜಲಿ ಹೇಳಿರೋಹಾಗೆ, 'ಯದ್ವಾ' ಪದಕ್ಕೆ ಕೆಲವರು 'ಯರ್ವಾ' ಎಂದೂ ತದ್ವಾಪದಕ್ಕೆ ತರ್ವಾ ಎಂತಲೂ ಹೇಳುತ್ತಾರೆ. "ಯರ್ವಾಣ ಸ್ತರ್ವಾಣ ಋಷಿಯಾ ಅಭೂವುಃ."

ಮಲ್ಲಿಕಾ :- ನನಗೆ ಇಷ್ಟೆಲ್ಲಾ ಜ್ಞಾನವಿಲ್ಲ.
[ರಂಗಿಣಿ ನಿರಾಶೆಯಿಂದ ಆಸನದ ಮೇಲೆ ಕೂಡುವಳು. ಸಂಗಿಣಿ ಸುತ್ತಾಡಿ ಪ್ರಕೋಷ್ಠದ ಪ್ರತಿಯೊಂದು ವಸ್ತುವನ್ನೂ ಪರೀಕ್ಷಿಸುವಳು. ಮಲ್ಲಿಕಾ ಸಂಗಿಣಿಯ ಬಳಿಗೆ ಹೋಗುವಳು]

ಸಂಗಿಣಿ :- ನೋಡಿ, ನಾವು ಇಲ್ಲಿನ ಜೀವನಕ್ಕೆ ಸಂಬಂಧಪಟ್ಟ ವಿಷಯಗಳನ್ನು ಮಾತ್ರ ತಿಳಿಯಲಪೇಕ್ಷಿಸ್ತೇವೆ. ಇಷ್ಟಲ್ಲದೆ ಬೇರೇನೂ ಇಲ್ಲ. ತಮ್ಮ ಮನೆ, ಉಡುಗೆ ತೊಡುಗೆ, ಹೆಚ್ಚು ಕಡಿಮೆ ನಮ್ಮ ಹಾಗೆಯೇ ಇದೆ. ಇಲ್ಲಿನ ಜೀವನಕ್ಕೆ ಸಂಬಂಧಪಟ್ಟ ವೈಶಿಷ್ಟ್ಯವೇನಾದರೂ ಇದೆಯೇ?
[ಕಿಟಕಿಯ ಕಡೆ ಮುಖ ಮಾಡಿ ಸ್ವಲ್ಪ ಹೊತ್ತು ನಿಲ್ಲುವಳು]

ಮಲ್ಲಿಕಾ :- ನನಗೇನೂ ತಿಳಿದಿಲ್ಲ. ನಮ್ಮ ಜೀವನವಂತೂ ಎಲ್ಲಾ ರೀತಿಯಲ್ಲಿ ತುಂಬಾ ಸರಳವಾದ್ದು, ಸಾಧಾರಣವಾದ್ದು.

ಸಂಗಿಣಿ :- ಇದನ್ನಂತು ನಾನೊಪ್ಪೊಲ್ಲ. ಕಾಳಿದಾಸನಂತಹ ಪ್ರತಿಭಾವಂತ ಅಸಾಧಾರಣ ಕವಿಯ ಜನ್ಮ ಭೂಮಿಯಾದ ಈ ಪ್ರದೇಶದ ಪ್ರತಿಯೊಂದು ವಸ್ತುವೂ ಅಸಾಧಾರಣವಾಗಿರಲೇ ಬೇಕು.

[ಒಲೆಯ ಹತ್ತಿರವಿರುವ ಪ್ರತಿಯೊಂದು ವಸ್ತುವನ್ನೂ ರಂಗಿಣಿ ಸೂಕ್ಷ್ಮವಾಗಿ ಪರೀಕ್ಷಿಸುತ್ತಾಳೆ. ಒಂದು ಸಾರಿ ಒಳಗೆ ಇಣುಕಿ ನೋಡುತ್ತಾ ಆ ಕಡೆ ಬರುವಳು]

ರಂಗಿಣಿ :- ನೋಡಿ, ನಿಜವಾಗ಼್ೂ ಹೇಳುವುದಾದ್ರೆ ನಾವು ರಾಜ್ಯದ ಕಡೆಯಿಂದ ಕಾಳಿದಾಸನ ಜೀವನ ಹಿನ್ನೆಲೆಯನ್ನು ಅಭ್ಯಾಸ ಮಾಡೋಕೆ ಬಂದಿದ್ದೀವಿ. ಇದರಿಂದ ತಮಗೇ ಗೊತ್ತಾಗ್ಬಹುದು. ಇದು ಎಷ್ಟು ಮುಖ್ಯವಾದ ಕೆಲ್ಸಾಂತ. ಆದರೆ ಇಲ್ಲೆಲ್ಲಾ ಸುತ್ತಾಡಿಯೂ ನಾವು ನಿರಾಶೆಯಿಂದ ಹಿಂತಿರುಗ ಬೇಕಾಗಿ ಬಂದಿದೆ. ಇಲ್ಲಂತು ನಮಗೆ ಬೇಕಾದ್ದು ಒಂದಿಷ್ಟೂ ಸಾಮಗ್ರಿ ದೊರೆಯಲಿಲ್ಲ.

ಸಂಗಿಣಿ :- ಸರಿ, ಇಲ್ಲಿನ ಕೆಲವು ಸಸ್ಯಗಳ ಹೆಸರನ್ನಾದರೂ ಹೇಳಿ ನೋಡೋಣ.

ಮಲ್ಲಿಕಾ :- ಎಂಥಾ ಸಸ್ಯಗಳು?

ಸಂಗಿಣಿ :- ಎಂಥಾದ್ದು? [ಯೋಚಿಸುವಳು] ಆಂ! ಕಾಳಿದಾಸ ಕುಮಾರ ಸಂಭವದಲ್ಲಿ ಬರೆದಿದ್ದಾನಲ್ಲ "ಭಾಸ್ವಂತಿ ರತ್ನಾನಿ ಮಹೌಷಧೀಂಶ್ವ" ಈ ಬೆಳಕ ಬೀರೋ ಬೇರುಗಳು ಎಂಥಾವು?

ಮಲ್ಲಿಕಾ :- ಬೇರುಗಳು ಬೆಳಕು ಕೊಡೊಲ್ಲ.

[ಸಂಗಿಣಿ ಎದ್ದು ನಿಲ್ಲುವಳು]

ಸಂಗಿಣಿ :- ಬೇರುಗಳು ಬೆಳಕು ಕೊಡೊಲ್ವೆ? ಅಂದ್ರೆ ನೀವು ಹೇಳೋದು ಕಾಳಿದಾಸ ಬರೆದಿರೋದೆಲ್ಲಾ ಸುಳ್ಳಂತ್ಲೇ?

ಮಲ್ಲಿಕಾ :- ಕಾಳಿದಾಸ ಬರೆದಿರೋದು ಯಾವುದೂ ಸುಳ್ಳಲ್ಲ. ಅವರೇನೆ ಬರೆದಿದ್ದಾರೆ... ಏನಂದ್ರೆ.....

ರಂಗಿಣಿ :- ಬಿಡು ಸಂಗಿಣಿ, ಇಲ್ಲಿನ ಜೀವನದ ವೈಶಿಷ್ಟ್ಯ ಏನೂಂತ ಇವರಿಗೇ ಗೊತ್ತಿಲ್ಲ.

[ರಂಗಿಣಿ ನಿರಾಶೆಯಿಂದ ಭುಜವಿಳಿಸಿ ಎದ್ದು ನಿಲ್ಲುವಳು]

ಸಂಗಿಣಿ :- ಒಳ್ಳೇದು, ನಾವಿನ್ನು ಬರ್ತೇವೆ. ತಮ್ಮ ಅಮೂಲ್ಯವಾದ ವೇಳೆಯನ್ನು ಹಾಳು ಮಾಡಿದ್ದಕ್ಕೆ ಕ್ಷಮೆಯಿರ್ಲಿ.

[ಇಬ್ಬರೂ ಹೊರಡುವರು. ಬಾಗಿಲು ಮುಚ್ಚುವಳು. ಆಸನದ ಬಳಿ ಕುಳಿತು ಹರಡಿ ಬಿದ್ದಿರುವ ಪುಟಗಳ ಮೇಲೆ ತಲೆಯೂರುವಳು. ಕಣ್ಣು ಮುಚ್ಚಿ ಸ್ವಲ್ಪ ಹೊತ್ತು ಹಾಗೇ ನಿಟ್ಟುಸಿರಿಡುವಳು]

ಎಷ್ಟೋ ವರ್ಷಗಳ ಮೇಲೆ ಇವತ್ತು ಬಂದಿದ್ಧಿ. ಅವತ್ತಿನ ಹಾಗೆ ಇಂದೂ ಮೋಡ ಕವಿದಿರುತ್ತೆ, ಹಾಗೆ ಕತ್ತಲು ತುಂಬಿರುತ್ತೆ, ಅದೇ ರೀತೀಲಿ ಮಳೇಲಿ ತೊಯ್ದು, ನಿನ್ಹತ್ರ ಬಂದು 'ನಿನ್ನೆಲ್ಲಾ ಕಾವ್ಯಗಳನ್ನು ಓದಿದ್ದೀನೀಂತ' ಹೇಳಬಯಸುತ್ತಿದ್ದೆ.

[ಆಸನದ ಮೇಲೆ ಬಿದ್ದಿರುವ ಕೆಲವು ಪುಟಗಳನ್ನು ಕೈಗೆತ್ತಿಕೊಳ್ಳುವಳು]

ಮಲ್ಲಿಕಾ :- ಉಜ್ಜಯಿನಿಯಿಂದ ಬರುವ ವಣಿಕರಿಂದ ಎಷ್ಟು ಬೇಡಿ ಇವುಗಳನ್ನು ತರಿಸಿದೆ. ಮೇಘದೂತದ ಪ್ರತಿಯೊಂದು ಸಾಲನ್ನೂ ನಿನಗೆ ಹಾಡಿ ಹಾಡಿ ತಣಿಸಬೇಕೆಂದಿದ್ದೆ. ಯಾವುದಾದರೂ ಪರ್ವತ ಶಿಖರದ ಗಂಟೆ ಬಾರಿಸಿದ್ದನ್ನು ಕೇಳಿ ಇದನ್ನು ನಿನ್ನ ಕೈಗಿಟ್ಟು [ವ್ಯಾಸ ಪೀಠದ ಮೇಲಿನ ಗ್ರಂಥವನ್ನು ಕೈಗೆತ್ತಿಕೊಳ್ಳುವಳು] ನೋಡು ಇದು ನನ್ನ ಹೊಸ ರಚನೆಗಾಗಿ ಹೇಳ ಬೇಕೆಂದಿದ್ದೆ. ಇದು ನಿನಗಾಗಿ ನಾನೇ ನನ್ನ ಸ್ವಂತ ಕೈಗಳಿಂದ ಸಿದ್ಧ ಮಾಡಿಟ್ಟಿದ್ದೇನೆ. ಇದರಲ್ಲಿ ನೀನು ಕಾವ್ಯ ರಚಿಸಿದರೆ, ಅದರೊಂದಿಗೆ ನಾನು ಚಿರಂಜೀವಿಯಾಗಿ ಬದುಕುತ್ತೇನೆ. ನನ್ನದೂ ಅದರಲ್ಲಿ ಸ್ವಲ್ಪವಿದೆ ಎಂಬ ಸಮಾಧಾನ ದೊರೆಯುವುದೆಂದಿದ್ದೆ.

[ನಿರಾಶೆಯ ನಿಟ್ಟುಸಿರಿಟ್ಟು ಗ್ರಂಥವನ್ನು ಇಟ್ಟು ಬಿಡುವಳು]

ನೀನೀಗ ಬಂದಿರುವೆ. ಆದರೆ ಪರಿಸ್ಥಿತಿಯೇ ಬೇರೆಯಾಗಿದೆ. ಅಲ್ಲದೆ ನೀನು ಹಿಂದಿನ ಕಾಳಿದಾಸನೇ ಆಗಿರುವೆಯೆಂದು ಯೋಚಿಸಲೂ ಸಾಧ್ಯವಾಗದಿದೆ.

[ಬಾಗಿಲು ತಟ್ಟಿದ ಶಬ್ದ. ಮಲ್ಲಿಕಾ ಚೇತರಿಸಿಕೊಂಡೆದ್ದು ಬಾಗಿಲು ತೆರೆಯುವಳು. ಅನುಸ್ವಾರ ಮತ್ತು ಅನುನಾಸಿಕರಿಬ್ಬರೂ ಜೊತೆಯಾಗಿ ನಿಂತಿರುವರು. ಮಲ್ಲಿಕಾ ಸ್ವಲ್ಪ ಚಿಂತೆಗೊಳಗಾಗುತ್ತಾಳೆ.]

ಅನುಸ್ವಾರ :- ನಾನು ಮಲ್ಲಿಕಾ ದೇವಿಯವರ ಮನೆಯಲ್ಲಿರುವೆನೆಂದು ಭಾವಿಸೋಣವೇ?

ಮಲ್ಲಿಕಾ :- ದಯಮಾಡಿಸಿ.

ಅನುಸ್ವಾರ :- ದೇವ ಮಾತೃಗುಪ್ತರ ಸೇವಕರು ಮಾಡುವ ನಮಸ್ಕಾರಗಳು.

[ಅನುಸ್ವಾರ. ಅನುನಾಸಿಕರು ಬಗ್ಗಿ ನಮಸ್ಕರಿಸುತ್ತಾರೆ. ಆಶ್ಚರ್ಯದಿಂದ ಮಲ್ಲಿಕಾ ಅವರ ಕಡೆ ನೋಡುವಳು]

ಮಲ್ಲಿಕಾ :- ದೇವ ಮಾತೃಗುಪ್ತರೆ? ಮಾತೃಗುಪ್ತರು ಯಾರು?

ಅನುಸ್ವಾರ:- 'ಋತು ಸಂಹಾರ' 'ಕುಮಾರಸಂಭವ' 'ಮೇಘದೂತ', 'ರಘುವಂಶಾದಿ' ಕಾವ್ಯಗಳನ್ನು ಬರೆದ ಕವೀಂದ್ರರು, ರಾಜನೀತಿ ನಿಷ್ಣಾತ ಆಚಾರ್ಯರು, ಅಲ್ಲದೆ ಕಾಶ್ಮೀರದ ಭಾವೀ ಶಾಸಕರು!! ಇಂಥವರಾದ ದೇವ ಮಾತೃಗುಪ್ತರ ರಾಜ ಮಹಿಷಿ, ಗುಪ್ತಕುಲಕನ್ಯೆ ಪರಮವಿದುಷಿ, ಶೀಘ್ರವಾಗಿ ಇಲ್ಲಿಗೆ ಬರಲಿಚ್ಛಿಸಿದ್ದಾರೆ. ಅವರ ಅನುಚರರಾದ ನಾವು ಇದರ ಪೂರ್ವ ಸೂಚನೆ ನೀಡಲು ಬಂದಿದ್ದೇವೆ.

ಮಲ್ಲಿಕಾ :- 'ಋತು ಸಂಹಾರ', 'ಮೇಘದೂತ' ಕಾವ್ಯಗಳ ಕರ್ತೃ ಕಾಳಿದಾಸ. ಆದರೆ ತಾವು ಹೇಳುತ್ತಿರುವುದು!.....

ಅನುಸ್ವಾರ :- ಗುಪ್ತ ರಾಜ್ಯದ ಪರವಾಗಿ ಅವರು ಕಾಶ್ಮೀರದ ಆಡಳಿತವನ್ನು ವಹಿಸಿಕೊಳ್ಳಲಿದ್ದಾರೆ. ಮಾತೃಗುಪ್ತರೆನ್ನುವುದು ಅವರ ನೂತನ ನಾಮಧೇಯ.

ಮಲ್ಲಿಕಾ :- ಅವರು ಕಾಶ್ಮೀರದ ಆಡಳಿತ ವಹಿಸಿಕೊಳ್ಳಲಿದ್ದಾರೆ...
..ಅವರ ರಾಜ ಮಹಿಷಿ ಇಲ್ಲಿ ನನ್ನ ಕಾಣಲು ಬರಲಿದ್ದಾರಾ?...

ಅನುಸ್ವಾರ :- ಇಂಥಾ ಗೌರವ ದೊರೆಯಲಿರುವ ಸಂದರ್ಭದಲ್ಲಿ ತಾವು ತಮ್ಮ ಮನೆಯನ್ನು ಸರಿಯಾಗಿ ಓರಣವಾಗಿಡಬೇಕೂಂತ ಬಯಸ್ತೀರಂತ ಭಾವಿಸೋಣವೇ? ತಾವಪ್ಪಣೆ ಕೊಡಿಸಿದರೆ ಕ್ಷಣ ಮಾತ್ರದಲ್ಲಿ ನಾವೇ ಎಲ್ಲಾ ವ್ಯವಸ್ಥೆ ಮಾಡಿ ಬಿಡ್ತೇವೆ. ಬಾ ಅನುನಾಸಿಕ.

[ಇಬ್ಬರೂ ಕೊಠಡಿಯೊಳಕ್ಕೆ ಬಂದು ಪ್ರತಿಯೊಂದು ವಸ್ತುವನ್ನೂ ಸೂಕ್ಷ್ಮವಾಗಿ ನಿರೀಕ್ಷಿಸುವರು. ಮಲ್ಲಿಕಾ ಮನೆಗೆ ತಾನೇ ಅಪರಿಚಿತಳಂತೆ ದೂರಸರಿದು ನಿಲ್ಲುವಳು]

'ಅನುನಾಸಿಕ ಮಣೆಯ ಬಳಿಗೆ ಬರುವನು.

ಅನುನಾಸಿಕ:- ಈ ಮಣೆ ಬಾಗಿಲಹತ್ರವಿದ್ದರೆ ಒಳ್ಳೇದನ್ಸುತ್ತೆ.

ಅನುಸ್ವಾರ :- ದೇವಿ ಇಲ್ಲಿಂದ್ಲೇ ಒಳಕ್ಕೆ ಬರ್ತಾಳೆ. ಇದನ್ನಿಲ್ಲಿಡುವುದೇ?

ಅನುನಾಸಿಕ:- ಹಾಗಾದರೆ ಇದನ್ನ ಈಗಿಡೋದಕ್ಕಿಂತ ಏಳಂಗುಲ ದಕ್ಷಿಣಕ್ಕೆ ಇಡೋಣ.

ಅನುಸ್ವಾರ :- ದಕ್ಷಿಣಕ್ಕೆ? [ಬೇಡವೆನ್ನುವಂತೆ ತಲೆಯಾಡಿಸುವನು] ನನ್ನ ಕೇಳೋದಾದ್ರೆ ಇದನ್ನ ಐದಂಗುಲ ಉತ್ತರಕ್ಕಿಡಬೇಕಂತೀನಿ. ಸೂರ್ಯನ ಬೆಳಕು ಗವಾಕ್ಷಿಯಿಂದ ನೇರಾಗಿ ಇದರ ಮೇಲೆ ಬೀಳುತ್ತೆ.

ಅನುನಾಸಿಕ:- ನಿನ್ನ ಮಾತನ್ನ ನಾನೊಪ್ಪೊಲ್ಲ.

ಅನುಸ್ವಾರ :- ನಾನು ನಿನ್ನ ಮಾತನ್ನೊಪ್ಪೊಲ್ಲ.

ಅನುನಾಸಿಕ:- ಹಾಗಾದ್ರೆ?

ಅನುಸ್ವಾರ:- ಹಾಗಾದ್ರೇಂದ್ರೆ? ಇಬ್ಬರಿಗೂ ಒಪ್ಪಿಗೆಯಿಲ್ದೆ ಇರೋದ್ರಿಂದ ಇದನ್ನ ಈಗ ಇರೋಹಾಗೆ ಇಟ್ಬಿಡೋಣ.

ಅನುನಾಸಿಕ:- ಸರಿ ಇಲ್ಲಿ ಇದ್ಕೊಳ್ಳಿ. ಇನ್ನು ಈ ಕೊಡಗಳು? [ಕೊಡಗಳ ಬಳಿ ನಡೆಯುವನು]

ಅನುಸ್ವಾರ :- ಒಂದು ಈ ಮೂಲೆಯಲ್ಲಿ, ಇನ್ನೊಂದು ಆ ಮೂಲೆಯಲ್ಲಿಟ್ಟರೆ ಇದು ಸರಿಹೋಗುತ್ತೇಂತ ಕಾಣುತ್ತೆ.

ಅನುನಾಸಿಕ:- ನಾನು ಹೇಳೋದಾದ್ರೆ, ಈ ಕೊಡಗಳೇ ಇಲ್ಲಿ ಇರಬಾರ್ದೂಂತ.

ಅನುಸ್ವಾರ :- ಯಾಕೆ?

ಅನುನಾಸಿಕ:- ಯಾಕಂದ್ರೆ? ಏನ್ಹೇಳ್ಲಿ?

ಅನುಸ್ವಾರ :- ನಾನೊಪ್ಪೊಲ್ಲ ನಿನ್ನ ಮಾತ್ನ

ಅನುನಾಸಿಕ:- ನಾನೂ ನಿನ್ನ ಮಾತನ್ನೊಪ್ಪೊಲ್ಲ.

ಅನುಸ್ವಾರ :- ಹಾಗಾದ್ರೇನ್ಮಾಡೋದು?

ಅನುನಾಸಿಕ:- ಏನ್ಮಾಡೋದೂಂದ್ರೆ ಇವೂ ಇಲ್ಲೇ ಇರ್ಲಿ.

[ಬಟ್ಟೆಗಳನ್ನು ಒಣಗ ಹಾಕಿರುವ ಹಗ್ಗದ ಬಳಿಗೆ ನಡೆಯುವರು. ಮಲ್ಲಿಕಾ ಹಾಸಿಗೆ ಬಳಿಗೆ ಹೋಗಿ ಹರಡಿ ಬಿದ್ದಿರುವ ಪುಟಗಳನ್ನು ಆಯ್ದು ಜೋಡಿಸಿ ವ್ಯಾಸಿಪೀಠದ ಮೇಲೆ ಇಟ್ಟು ಒಂದೆಡೆಗೆ ಸರಿಸಿ ಒಳಗೆ ಹೋಗುವಳು ಅನುಸ್ವಾರ ಬಟ್ಟೆಗಳನ್ನೆಲ್ಲಾ ಮುಟ್ಟಿ ನೋಡುವನು]

ಅನುಸ್ವಾರ :- ಈ ಬಟ್ಟೆಗಳು?

ಅನುನಾಸಿಕ:- ಇವಿನ್ನೂ ಒದ್ದೆಯಾಗಿರೋದ್ರಿಂದ ಇವುಗಳ್ನ ಇಲ್ಲಿಂದ ತೆಗೀಬಾರ್ದು.

ಅನುಸ್ವಾರ :- ಯಾಕೆ?

ಅನುನಾಸಿಕ:– ಯಾಕಂದ್ರೆ? ಶಾಸ್ತ್ರಗಳು ಹಾಗೆ ಹೇಳುತ್ತವೆ.

ಅನುಸ್ವಾರ :– ಅದಕ್ಕೆ ಪ್ರಮಾಣವೇನು?

ಅನುನಾಸಿಕ:– ನನಗೆ ನೆನಪಿಲ್ಲ.

ಅನುಸ್ವಾರ:– ಶಾಸ್ತ್ರದಲ್ಲಿ ಇದಕ್ಕೆ ಪ್ರಮಾಣವಿದೇನ್ನೋದು ನೆನಪಿದೆಯಾ?

ಅನುನಾಸಿಕ:– ಹೂಂ!

ಅನುಸ್ವಾರ :– ಹಾಗಾದ್ರೆ?

ಅನುನಾಸಿಕ:– ಹಾಗಾದ್ರೆ ಸಂದಿಗ್ಧ ವಿಷಯ?

ಅನುಸ್ವಾರ :– ಖಂಡಿತ ತುಂಬ ಸಂದಿಗ್ಧವೇ!

ಅನುನಾಸಿಕ:– ಸಂದಿಗ್ಧ ವಿಷಯವಾದ್ರಿಂದ ಈ ಬಟ್ಟೆಗಳ್ನೂ ಇಲ್ಲಿಯೇ ಬಿಡೋಣ.

ಅನುಸ್ವಾರ:– ಸರಿ ಹಾಗೇ ಮಾಡೋಣ.

ಅನುನಾಸಿಕ:– ಆದ್ರೆ ಈ ಒಲೇನ ಇಲ್ಲಿಂದ ದೂರ ಸಾಗಿಸಬೇಕು.

ಅನುಸ್ವಾರ :– ಒಲೆ ಸರಿಸೋದ್ರಿಂದ ಎಲ್ಲಾ ಸಾಮಾನನ್ನೂ ಸಾಗಿಸಬೇಕು. ಅದಕ್ಕೇ ತುಂಬಾ ಸಮಯ ಬೇಕಾಗುತ್ತೆ.

ಅನುನಾಸಿಕ:– ಸಮಯ ಮಾತ್ರಾ ಅಲ್ಲ, ಧೈರ್ಯಾನೂ ಬೇಕು.

ಅನುಸ್ವಾರ :– ಮುಸುರೆ ಪಾತ್ರೆ, ಎಂಜಲು ಪಾತ್ರೆಗಳಿಗೆ ಕೈ ಹಾಕೋದು ನಮ್ಮಂಥೋರ ಯೋಗ್ಯತೆಗೆ ಸಲ್ಲೋಂಥಾದ್ದಲ್ಲ.

ಅನುನಾಸಿಕ:– ನನಗೂ ಹಾಗೇ ಅನ್ಸುತ್ತೆ.

ಅನುಸ್ವಾರ :– ಅಂದ್ಮೇಲೆ ಈ ವಿಷಯದಲ್ಲಿ ನಮ್ಮಿಬ್ಬರದೂ ಒಮ್ಮತವಲ್ವೆ?

ಅನುನಾಸಿಕ:– ಹಾಗಂತ್ಲೇ ಕಾಣುತ್ತೆ.

[ಅ.ನಾ ನಾಲ್ಕೂ ಕಡೆ ಕಣ್ಣು ಹಾಯಿಸುವನು]

ಅನುನಾಸಿಕ:– ಏನೂ ಉಳಿದಂತೆ ಕಾಣೊಲ್ಲ.

ಅನುನಾಸಿಕ:– ಇಲ್ಲ ಇಲ್ಲ ಇನ್ನೂ ಬಾಕಿಯಿದೆ.

ಅನುಸ್ವಾರ :– ಏನು?

ಅನುನಾಸಿಕ:– ಈ ಮಣೆ ಹೀಗೆ ದಾರೀಲಿ ಬಿದ್ದಿರಬಾರ್ದು.

ಅನುಸ್ವಾರ :– ಹೌದು ಬಿದ್ದಿರಬಾರ್ದು.

ಅನುನಾಸಿಕ:– ಹಾಗಾದ್ರೆ?

ಅನುಸ್ವಾರ :– ಹಾಗಾದ್ರೆ?

ಅನುನಾಸಿಕ:– ಇಲ್ಲಿಂದ ಇದನ್ನ ಸಾಗಿಸಬೇಕು.

ಅನುಸ್ವಾರ :– ಹೌದೌದು ಸಾಗಿಸ್ಲೇಬೇಕು.

ಅನುನಾಸಿಕ:– ಮತ್ತೆ?

ಅನುಸ್ವಾರ :– ಮತ್ತೆ?

ಅನುನಾಸಿಕ:– ಇದನ್ನೆತ್ತಿ ದೂರ ಇಡು.

ಅನುಸ್ವಾರ :– ನಾನೇ?

ಅನುನಾಸಿಕ:– ಹೌದು

ಅನುಸ್ವಾರ:– ನೀನು?

ಅನುನಾಸಿಕ:– ಇಲ್ಲ.

ಅನುಸ್ವಾರ:– ಯಾಕೆ?

ಅನುನಾಸಿಕ:– ಯಾಕಂತ ಕೇಳ್ಬೇಡ.

ಅನುಸ್ವಾರ:– ಆದ್ರೂ.

ಅನುನಾಸಿಕ:– ಮೊದಲು ನಾನೇ ನಿನಗೆ ಹೇಳಿದ್ದು.

ಅನುಸ್ವಾರ:– ಮಣೆ ನೋಡ್ದವನು, ಮೊದಲು ನೀನು.

ಅನುನಾಸಿಕ:– ಅಂದ್ರೆ?

ಅನುಸ್ವಾರ:– ಅಂದ್ರೆ?

ಅನುನಾಸಿಕ:– ಎತ್ತಿಡು.

ಅನುಸ್ವಾರ:– ಎತ್ತಿಡು

ಅನುನಾಸಿಕ:– ಹಾಗಾದ್ರೆ ಇದ್ಕೊಳ್ಳಿ ಬಿಡು.

ಅನುಸ್ವಾರ:– ಇದ್ಕೊಳ್ಳಿ ಬಿಡು

ಅನುನಾಸಿಕ:– ಈಗ?

ಅನುಸ್ವಾರ:– ಹೌದು ಈಗ?

ಅನುನಾಸಿಕ:– ಮತ್ತೊಂದ್ಸಾರಿ ಎಲ್ಲಾ ನೋಡೋಣ

ಅನುಸ್ವಾರ:– ಹೌದು ಇನ್ನೊಂದ್ಸಾರಿ ಎಲ್ಲಾ ನೋಡಿ ಬಿಡೋಣ.

[ಮಾತುಲ ಆತುರಾತುರನಾಗಿ ಬರುವನು]

ಮಾತುಲ:– ಅಧಿಕಾರಿಗಳೇ ತಮ್ಮ ಇಲ್ಲಿನ ಕೆಲ್ಸ ಮುಗೀತೆ?

ಅನುನಾಸಿಕ:– ಏನನುಸ್ವಾರ! ಆಯ್ತಾ ಕೆಲ್ಸ?

ಅನುಸ್ವಾರ:- ಹೂಂ ಆಯ್ತು... ಆಯಿತಲ್ಲ? ಆಯಿತಲ್ವೆ ಅನುನಾಸಿಕ?

ಅನುನಾಸಿಕ:- ಆಯ್ತು ಆದ್ರೆ ಇನ್ನೊಮ್ಮೆ ಎಲ್ಲಾ ಕಡೆ ನೊಡ್ಬೇಕಾಗಿದೆ.

ಅನುಸ್ವಾದ:- ಹೌದೌದು. ಒಂದ್ಸಲ ನೋಡೋದು ಬಾಕಿಯಿದೆ.

ಮಾತುಲ:- ನೀವು ನೋಡೋದಿರ್ಲಿ. ದೇವಿ ಪ್ರಿಯಂಗು ಮಂಜರಿಯವರು ಬಂದಾಗ್ಲೇ ಹೊರಗೆ ನಿಂತಿದ್ದಾರೆ.

ಅನುನಾಸಿಕ:- ದೇವಿಯವರು ಹೊರಗೆ ನಿಂತಿದ್ದಾರೆಯೇ? ನಡೆ, ಅನುಸ್ವಾರ, ನಡೆ.

ಅನುಸ್ವಾರ:- ಹೂಂ! ನಡೆ.

[ಇಬ್ಬರೂ ಹೊರಡುವರು. ಅವರ ಹಿಂದೆ ಮಾತುಲನೂ ಹೋಗುವನು. ಸ್ವಲ್ಪ ಹೊತ್ತಿನನಂತರ ಪ್ರಿಯಂಗು ಮಂಜರಿಗೆ ದಾರಿ ತೋರಿಸುತ್ತಾ ಒಳಗೆ ಬರುವನು]

ಮಾತುಲ:- ಇವಳು ಈ ಹಳ್ಳೀಗೇ ಸುಶೀಲೆ, ವಿನೀತೆ, ಮುಗ್ಧ ಹುಡುಗಿ....

[ಮಲ್ಲಿಕಾ ಒಳ ಕೋಣೆಯಿಂದ ಬರುವಳು]

ಬಾ ಮಲ್ಲಿಕಾ, ಬಾ ನಿನ್ನ ಮಾತೇ ಹೇಳ್ತಿದ್ದೆ. ದೇವಿ ಮುಂದೆ ನಾನೀಗ, ನಿನ್ನನ್ನೇ ಹೊಗಳ್ತಿದ್ದೆ. ಇವರು ಬಂದಾಗಿನಿಂದ ನಿನ್ನನ್ನೇ ತುಂಬಾ ಕೇಳ್ತಿದ್ದಾರೆ.... ಇವಳೇ ಮಲ್ಲಿಕಾ. ಇಲ್ಲಿನ ರಾಜ ಹಂಸ.

ಅ.... ಆ..... ಅ.... ಮಲ್ಲಿಕಾ. ದೇವಿಕೂತ್ಕೊಳ್ಳೋಕೆ ಎಲ್ಲ ಏರ್ಪಾಟಾಗಿದೆ?

[ಮಲ್ಲಿಕಾ ನಮಸ್ಕರಿಸುವಳು. ಪ್ರಿಯಂಗು ಮಂಜರಿ, ಮಂದಹಾಸದಿಂದ ಪ್ರತಿನಮಸ್ಕಾರ ಸೂಚಿಸುವಳು]

ಪ್ರಿಯಂಗು:- ಆರ್ಯ ಮಾತುಲರೇ, ತಾವು ಹೋಗಿ ವಿಶ್ರಾಂತಿ ತಗೊಳ್ಳಿ. ನನ್ನ ಸೇವಕರು ನನಗಾಗಿ ಹೊರಗೆ ಕಾಯ್ತಾರೆ.

ಮಾತುಲ:- ಆದ್ರೆ ತಮಗೆ ಕೂತ್ಕೊಳ್ಳೋಕೆ....

ಪ್ರಿಯಂಗು:- ತಾವೇನೂ ಯೋಚಿಸ್ಬೇಡಿ. ನನಗೇನೂ ತೊಂದರೆಯಾಗೊಲ್ಲ.

ಮಾತುಲ:- ತೊಂದರೆಯಂತೂ ಆಗೇ ಆಗುತ್ತೆ. ತೊಂದರೆಯಾದ್ರೂ, ತಾವು ತೊಂದ್ರೇಂತ ಭಾವಿಸದೇ ಇರೋದು ಬೇರೇ ಮಾತು. ಇದನ್ನೇ ಕುಲೀನತೆ ಅನ್ನೋದು. ದೊಡ್ಡವರ ಕುಲದಲ್ಲಿ ಹುಟ್ಟಿರೋವ್ರ ಬಾಯಲ್ಲೇ ಇಂಥ ಮಾತು ಬರೋದು...

ಪ್ರಿಯಂಗು:- ತಾವು ಹೋಗಿ ವಿಶ್ರಮಿಸಿ ಕೊಳ್ಳಿ. ಮೊದಲೇ ನನ್ನಿಂದಾಗಿ ತುಂಬಾ ದಣಿದಿದ್ದೀರಿ

ಮಾತುಲ:- ತಮ್ಮಿಂದಾಗಿ ದಣಿದಿದ್ದೇನೆಯೇ? [ವ್ಯಂಗ್ಯವಾಗಿ ನಗುವನು]

ತಮ್ಮಿಂದಾಗಿ ನಾನು ದಣೀತೇನೆಯೇ? ಇಡೀ ದಿನ ಬೆಟ್ಟಗುಡ್ಡ, ಹಳ್ಳ ದಿಣ್ಣೆಗಳನ್ನೇರಿ ಇಳಿಯಲು ಹೇಳಿದ್ರೂ ನಾನು ದಣೀತಿರ್‍ಲಿಲ್ಲ. ಮಾತುಲನ ಶರೀರ ಉಕ್ಕಿನಿಂದಾಗಿದೆ. ಉಕ್ಕಿನಿಂದ! ಆತ್ಮ ಸ್ತುತೀಂತ ತಿಳೀಬೇಡಿ. ನಮ್ಮ ವಂಶದಲ್ಲಿ ಪ್ರತಿಭೆಯೊಂದೇ ಅಲ್ಲ ಪೌರುಷವೂ ಇದೆ. ದನಕರುಗಳ ಹಿಂದೆ ದಿನಕ್ಕೆ ಹತ್ತತ್ತು ಯೋಜನ ದೂರ ಓಡಿದ್ದೇನೆ. ಪಶು ಪಾಲಕನ ಕೆಲಸ ಪ್ರಪಂಚದಲ್ಲಿ ಹೆಚ್ಚು ಕಷ್ಟದ ಕೆಲಸ... ಒಂದು ಪಶು ತಪ್ಪಿಸಿಕೊಂಡ್ರೂ...

**ಪ್ರಿಯಂಗು:-** ಹಾಗಾದ್ರೆ ಈವತ್ತೂ ನಿಮ್ಮ ಪಶುವು ದಾರಿ ತಪ್ಪಿಸಿಕೊಂಡೇ ನಾದ್ರೂ ಹೋಗಿರಬೇಕು. ತಾವು ಹೋಗಿ ನೋಡಬಾರ್ದೆ?

**ಮಾತುಲ:-** ಗುಪ್ತ ವಂಶದೊಡನೆ ನಂಟುತನ ಬೆಳೆದ ಮೇಲೆ ನಾನು ಪಶುಗಳನ್ನು ನೋಡಿಕೊಳ್ಳೋದೆ? ಛೆ! ಛೆ! ಅಲ್ದೆ ನನ್ನ ಪಶುಗಳ್ನೆಲ್ಲಾ ಎಷ್ಟೋ ವರ್ಷದ ಹಿಂದೇನೇ ಮಾರಿಬಿಟ್ಟೆ. ನಿಜವಾಗಿ ಹೇಳೋದಾದ್ರೆ, ಇದರಿಂದ್ಲೂ ನನಗೆ ಲಾಭಾನೆ! ಯಾಕಂದ್ರೆ...

[ಮಲ್ಲಿಕಾಳ ನೋಟ ಪ್ರಿಯಂಗು ನೋಟದೊಂದಿಗೆ ಸೇರಿರುವುದು. ಪ್ರಿಯಂಗು ಮುಂದೆ ಬಂದು ಅವಳ ಕೈ ಹಿಡಿಯುವಳು]

**ಪ್ರಿಯಂಗು:-** ನಾನು ಊಹಿಸಿದ್ದ ಹಾಗೇ ಇದ್ದೀ ನೀನು.

[ಅವಳು ಹತ್ತಿರ ಬಂದಂತೆ ಮಲ್ಲಿಕಾಳ ಸಂಕೋಚ ಹೆಚ್ಚುವುದು]

**ಮಾತುಲ:-** ಯಾಕಂದ್ರೆ... ಸ... ಸ... ಸರಿ ಹಾಗಾದ್ರೆ ನನಗೆ ಅಪ್ಪಣೆಯೇ. ಮನೆಯೆಲ್ಲಾ ತುಂಬ ಅಸ್ತವ್ಯಸ್ತವಾಗಿದೆ. ಹೋಗಿ ಅದನ್ನು ನೋಡ್ಬೇಕು. ತಮ್ಮ ನಿರೀಕ್ಷೆಯಲ್ಲಿರುತ್ತೇನೆ. ಏನಾದರೂ ಹೇಳುವುದಿದ್ದರೆ ಅಪ್ಪಣೆ ಕೊಡಿಸಿ. ಮಲ್ಲಿಕಾ, ದೇವಿಕೂತ್ಕೊಳ್ಳೋಕೆ ಏನಾದ್ರೂ ಹಾಸು.

**ಪ್ರಿಯಂಗು:-** ತಾವು ಹೊರಡ್ಬಹುದು. ಇಲ್ಲಿನ ವಿಷಯಕ್ಕೆ ತಾವೇನು ಯೋಚಿಸ್ಬೇಕಾದ ಅಗತ್ಯವಿಲ್ಲ.

**ಮಾತುಲ:-** ಒಳ್ಳೇದು.... (ಹೊರಡುವನು) ನನಗೆ ಯೋಚಿಸ್ಬೇಕಾದ ಅಗತ್ಯವೇನಿದೆ. ನಿಮ್ಮನ್ನು ನೋಡ್ಕೊಳ್ಳೋಕೆ ಮಲ್ಲಿಕಾ ಇದ್ದಾಳೆ. ಅಂಬಿಕಾ ಇದ್ದಾಳೆ.... ಆದ್ರೂ ಏನಾದ್ರೂ ಬೇಕಾದಲ್ಲಿ ಸಂಕೋಚ ಪಟ್ಕೋಬೇಡಿ.

[ಹೊರಡುವನು ಪ್ರಿಯಂಗು ಮಂಜರಿ ಕ್ಷಣಕಾಲ ಮಲ್ಲಿಕಾಳನ್ನು ನೋಡುತ್ತಿರುವಳು ನಂತರ ಅವಳ ಗಲ್ಲವನ್ನು ಹಿಡಿದು]

**ಪ್ರಿಯಂಗು:-** ಮಲ್ಲಿಕಾ, ನೀನು ನಿಜವಾಗಿಯೂ ಸುಂದರಳಾಗಿದ್ದಿ, ಗೊತ್ತೇನು... ನೀನು

ನನಗೆ ಹೊಸಬಳಾದ್ರೂ, ನನಗೆ ಹೊಸಬಳಂತೆ, ಅಪರಿಚಿತಳಂತೆ ಕಾಣ್ತಿಲ್ಲ.

ಮಲ್ಲಿಕಾ :- ಕೂತ್ಕೊಳ್ಳಿ.

ಪ್ರಿಯಂಗು :- ಕೂತ್ಕೊಳ್ಳೋಕಿಂತ್ಲೂ ನಿನ್ನನ್ನು, ನಿನ್ನ ಮನೆಯನ್ನು ನೋಡೋಕೆ ಇಷ್ಟಪಡ್ತೇನೆ. ಅವ್ರು ಎಷ್ಟೋ ಸಲ ನಿನ್ನ ವಿಷಯಾನೇ ಮಾತಾಡ್ತಿದ್ರು. 'ಮೇಘದೂತ' ರಚನೆ ಮಾಡ್ಬೇಕಾದ್ರೆ, ಇಲ್ಲಿನ ಪ್ರದೇಶವನ್ನೇ ಸ್ಮರಿಸಿಕೊಳ್ತಿದ್ರು.

[ಒಮ್ಮೆ ಸುತ್ತಲೂ ನೋಡಿ ಮತ್ತೆ ಮಲ್ಲಿಕಾಳ ಮೇಲೆ ದೃಷ್ಟಿ ನೆಡುವಳು]

ಇಲ್ಲಿನ ಆಕರ್ಷಣೆಗೆ ಸಿಕ್ಕಿಯೇ ಇಲ್ಲಿಗೆ ಬರಬೇಕಾಯ್ತು. ಇಲ್ಲವಾದಲ್ಲಿ ಇಷ್ಟು ಹೊತ್ತಿಗೆ ಕಾಶ್ಮೀರ ರಾಜಧಾನಿಯನ್ನು ತಲುಪುತ್ತಿದ್ದೆವು.

ಮಲ್ಲಿಕಾ :- ನಿಮ್ಮನ್ನು ಹೇಗೆ ಸತ್ಕರಿಸ ಬೇಕೋ ತಿಳೀತಿಲ್ಲ. ತಾವು ಆಸನವನ್ನು ಸ್ವೀಕರಿಸೋದಾದ್ರೆ.

ಪ್ರಿಯಂಗು :- ನನ್ನ ಆತಿಥ್ಯದ ಬಗ್ಗೆ ಯೊಚಿಸ್ಬೇಡ ಮಲ್ಲಿಕಾ. ಇಲ್ಲಿಗೆ ನಾನು ಅತಿಥಿಯಾಗಿ ಬಂದಿಲ್ಲ. ಅವ್ರು ಇಲ್ಲಿಗೆ ಬರೋ ಸಂಭವವೇ ಇರಲಿಲ್ಲ. ಆದ್ರೂ ನನ್ನ ಬಲವಂತಕ್ಕೆ ಬಂದಿದ್ದಾರೆ. ಅಲ್ದೆ ನಾನೇ ಈ ಪ್ರದೇಶವನ್ನು ನೋಡ್ಬೇಕೆಂದಿದ್ದೆ ಜೊತೆಗೆ..... [ಚತುರತೆಯಿಂದ] ಇನ್ನೂ ಒಂದು ಕಾರಣವಿತ್ತು. ಇಲ್ಲಿನ ಪ್ರಾದೇಶಿಕತೆಯನ್ನು ಕೊಂಡೊಯ್ಯ ಬೇಕೆಂದಿದ್ದೆ.

ಮಲ್ಲಿಕಾ :- [ಆಶ್ಚರ್ಯ ಚಕಿತಳಾಗಿ] ಇಲ್ಲಿನ ಪ್ರಾದೇಶಿಕತೆಯಾ?

[ಪ್ರಿಯಂಗು ಮಂದ ಹಾಸದಿಂದ ಅವಳನ್ನು ನೋಡಿ, ಸುತ್ತಾಡುತ್ತಾ ಕಿಟಕಿಯ ಬಳಿಗೆ ಬರುವಳು]

ಪ್ರಿಯಂಗು :- ಇಲ್ಲಿಂದ ಬಹು ದೂರದವರೆಗೂ ಹಬ್ಬಿರುವ ಪರ್ವತಶ್ರೇಣಿ.... ಎಷ್ಟು ನಿರ್ಮಲ ಸೌಂದರ್ಯ!..... ನಾನಿಲ್ಲಿಗೆ ಬಂದು ನಿನ್ನೊಡನೆ ಸ್ಪರ್ಧೆಗೆ ನಿಂತಂತಾಗಿದೆ.

ಮಲ್ಲಿಕಾ :- [ಒಂದೆರಡು ಹೆಜ್ಜೆ ಆ ಕಡೆ ನಡೆದು] ಇನ್ನೂ ಕೆಲವು ದಿನ ತಾವಿಲ್ಲಿರುವುದಾದ್ರೆ.... ನಮ್ಮ ಪುಣ್ಯ! ತಮಗೆ ಇಲ್ಲಿ ಅನಾನುಕೂಲವೇನೋ ಆಗ್ಬಹುದು.... ಆದ್ರೂ...

ಪ್ರಿಯಂಗು :- [ಚತುರ ದೃಷ್ಟಿಯಿಂದ ಅವಳತ್ತನೋಡಿ] ಈ ಚೆಲುವಿನ ಎದುರು ಜೀವನದ ಎಲ್ಲಾ ಸುಖಗಳೂ ತುಚ್ಛವೇ. ಇದನ್ನು ಕಂಗಳಲ್ಲಿ ತುಂಬಿಕೊಂಡು

ಆಸ್ವಾದಿಸಲು ಇಡೀ ಜೀವನ ಕಾಲವೂ ಸಾಲದು. [ಕಿಟಕಿಯಿಂದ ದೂರ ಸರಿದು] ಆದರೆ ಇದಕ್ಕೆಲ್ಲಾ ಅವಕಾಶವೆಲ್ಲಿ, ಕಾಶ್ಮೀರದಲ್ಲಿನ ರಾಜಕೀಯ ಪರಿಸ್ಥಿತಿ ಎಷ್ಟು ಅವ್ಯವಸ್ಥಿತವಾಗಿದೇಂದ್ರೆ, ಅಲ್ಲಿಂದ ಒಂದು ಕ್ಷಣ ದೂರವಿರುವುದು ಎಷ್ಟೊ ಸಮಸ್ಯೆಗೆ ಅವಕಾಶ ಕೊಟ್ಟಂತಾಗುತ್ತೆ.... ಒಂದು ದೇಶದ ಆಡಳಿತ ಎಷ್ಟೋ ಜವಾಬ್ಧಾರಿಯುತವಾದುದು.

ಆದ್ರೆ ಕಾಶ್ಮೀರದ ಪರಿಸ್ಥಿತಿ ವಿಷಮವಾಗಿರುವುದರಿಂದ, ಈ ಹೊಣೆಗಾರಿಕೆ ಇನ್ನೂ ಗುರುತರದ್ದಾಗಿದೆ. ಕಾಶ್ಮೀರವೇ ಚೆಲುವಿನ ತವರಾಗಿದ್ದರೂ, ಒಂದು ನಿಮಿಷವೂ, ಆ ಚೆಲುವನ್ನು ಕಣ್ತುಂಬಾ ನೋಡಿ ಸುಖಿಸಲು ಬಿಡುವಿಲ್ಲ. [ಆಸನದ ಮೇಲೆ ಕೂಡುವಳು] ಚೆಲುವು, ಸೌಂದರ್ಯ ವೆನ್ನುವುದು ನಮ್ಮ ಪಾಲಿಗೆ ಕನಸಿನ ಪದಗಳಾಗಿವೆ. ಅದಕ್ಕೇ ನಿನ್ನನ್ನು ಕಂಡು ಈರ್ಷ್ಯೆಯುಂಟಾಗುತ್ತೆಂದದ್ದು.... ಬಾ ಕುಳಿತುಕೊ. [ಆಸನದ ಮೇಲೆ ತನ್ನ ಹತ್ತಿರ ಕುಳಿತುಕೊಳ್ಳುವಂತೆ ಸನ್ನೆ ಮಾಡುವಳು. ಮಲ್ಲಿಕಾ ಕೆಳಗೆ ಕುಳಿತು ಕೊಳ್ಳುವ ಪ್ರಯತ್ನದಲ್ಲಿರುವಾಗಲೇ, ಪ್ರಿಯಂಗು ಸನ್ನೆಯಿಂದ ಬೇಡವೆನ್ನುವಳು]

ಇಲ್ಲಿ ಹತ್ತಿರ ಕುಳಿತಕೊ.

ಮಲ್ಲಿಕಾ :- ಬೇಡ ನಾನು ಬೇರೆ ಆಸನವನ್ನು ತರ್ತೇನೆ.

[ಮೂಲೆಯಲ್ಲಿದ್ದ ವ್ಯಾಸಪೀಠವನ್ನು ಆಸನದ ಬಳಿ ಇಡುವಳು; ಮತ್ತು ಅದರಮೇಲೆ ಇಟ್ಟಿರುವ ಭೂರ್ಜ ಪತ್ರ ಮುಂತಾದುವನ್ನು ತನ್ನ ಮಡಿಲಲ್ಲಿ ಹಾಕಿಕೊಂಡು ಕುಳಿತು ಕೊಳ್ಳುವಳು]

ಪ್ರಿಯಂಗು :- ಹಳ್ಳೀಲಿದ್ದೂ ನಿನಗೆ ಸಾಹಿತ್ಯಾಭಿರುಚಿ ಇರೋ ಹಾಗಿದೆ!

[ಮಲ್ಲಿಕಾಳ ದೃಷ್ಟಿ ಕೆಳಮುಖವಾಗುವುದು]

ಈ ಕೃತಿಗಳಾರವು?

ಮಲ್ಲಿಕಾ :- ಕಾಳಿದಾಸನವು.

ಪ್ರಿಯಂಗು :- [ಪ್ರಿಯಂಗು ಹುಬ್ಬುಗಂಟಿಡುವಳು] ಈಗ ಅವರನ್ನು ಮಾತೃಗುಪ್ತರೆಂದೇ ಕರೆಯಲಾಗುತ್ತೆ. ಏನು, ಇಲ್ಲಿಯೂ ಇವರ ಕೃತಿಗಳು ಸಿಕ್ಕುತ್ತವೆಯೇ?

ಮಲ್ಲಿಕಾ :- ಇಲ್ಲ ಇವುಗಳನ್ನು, ಉಜ್ಜಯಿನಿಯ ಕಡೆಯಿಂದ ಬರೋ ವ್ಯಾಪಾರಿಗಳಿಂದ ತರಿಸಿಕೊಂಡೆ [ಪ್ರಿಯಂಗುವಿನ ಮುಖದ ಮೇಲೆ ವ್ಯಂಗ್ಯನಗು]

ಪ್ರಿಯಂಗು:- ನನಗೆ ಅರ್ಥವಾಯಿತು. ಹೌದು, ಅಂದಹಾಗೆ, ನೀನು ಅವರ ಬಾಲ್ಯದ ಗೆಳತಿಯಾಗಿದ್ದೇಂತ್ಲೂ ಕೇಳಿದ್ದೇನೆ. ಅದಕ್ಕೆ ಅವರ ಕೃತಿಗಳನ್ನು ಕಂಡ್ರೆ ನಿನಗೆಷ್ಟು ಮೋಹ! ಇದು ಸ್ವಾಭಾವಿಕವೇ ಸರಿ.

[ಏನೋ ಯೋಚಿಸುವವಳಂತೆ ಮೇಲೆ ನೋಡುವಳು]

ಅವ್ರೂ, ಇಲ್ಲಿನ ಜೀವನವನ್ನು ಸ್ಮರಿಸಿಕೊಳ್ಳೋದ್ರಲ್ಲೇ ಮೈಮರೆತುಬಿಡ್ತಾರೆ. ಅದಕ್ಕಾಗಿಯೇ, ರಾಜಕೀಯದ ಕಡೆಯಿಂದ ಆಗಾಗ ಅವ್ರು ವಿಮುಖರಾಗ್ತಿರ್ತಾರೆ.

[ಆಕಸ್ಮಾತ್ತಾಗಿ ಅವಳ ಕಣ್ಣು ಮಲ್ಲಿಕಾಳ ಮುಖದ ಮೇಲೆ ನೆಡುವುದು]

ಇಂಥಾ ಹೊತ್ತಿನಲ್ಲಿ ಅವರನ್ನು ಮತ್ತೆ ಸಮತೋಲನ ಸ್ಥಿತೀಗೆ ತಂದು, ಕಾರ್ಯೋನ್ಮುಖರಾಗುವಂತೆ ಮಾಡೋದಂತೂ ವಿಪರೀತ ಪ್ರಯಾಸದ ಕೆಲಸವೇಸರಿ. ರಾಜನೀತಿ ಸಾಹಿತ್ಯವಲ್ಲ. ಒಂದು ಕ್ಷಣ ಅಜಾಗರೂಕತೆ ಮಾಡಿದ್ರಂತೂ ವಿಪರೀತ ಅನಾಹುತವಾಗುತ್ತೆ. ರಾಜಕೀಯದ ನೊಗಕ್ಕೆ ತಲೆಕೊಟ್ಟ ಮನುಷ್ಯನಂತೂ ಸದಾ ಎಚ್ಚರಿಕೆಯಿಂದಿರಬೇಕಾಗುತ್ತೆ. ಸಾಹಿತ್ಯ ಅವರ ಜೀವನದ ಮೊದಲ ಹೆಜ್ಜೆ. ಈಗವರು ರಾಜನೀತಿಯನ್ನೋ ಎರಡನೇ ಹೆಜ್ಜೆಯಿಟ್ಟಿರುವರು. ಇಟ್ಟಿರುವ ಈ ಹೆಜ್ಜೆಯಿಂದ ಹಿಮ್ಮೆಟ್ಟಬರದಂತೆ ಅವರನ್ನು ತಡೆಹಿಡಿದು ನಿಲ್ಲಿಸುವುದರಲ್ಲಿಯೇ ನನ್ನ ಶ್ರಮ ವ್ಯರ್ಥವಾಗುತ್ತೆ.... ಇದು ನಿಜವಾಗಿಯೂ ಕಷ್ಟ ಸಾಧ್ಯದ ಬದುಕು! [ಮುಗುಳ್ನಕ್ಕು] ನಿನಗೆ ಹಾಗನಿಸೊಲ್ಲ?

ಮಲ್ಲಿಕಾ :- ರಾಜಕೀಯ ವಿಷಯದ ಜ್ಞಾನ ನನಗೆಳ್ಳಷ್ಟೂ ಇಲ್ಲ.

ಪ್ರಿಯಂಗು :- [ನಿಟ್ಟುಸಿರಿಟ್ಟು] ಯಾಕಂದ್ರೆ ನೀನು ಹಳ್ಳೀಲೇ ಬೆಳೆದವಳು. [ಏಳುವ ಪ್ರಯತ್ನದಲ್ಲಿರಲು ಮಲ್ಲಿಕಾಳೂ ಏಳುವಳು. ಆದರೆ ಪ್ರಿಯಂಗು ಆಕೆಯ ಭುಜವಿಡಿದು ಕೂಡಿಸುವಳು] ಕೂತ್ಕೊಂಡಿರು.

[ಇಬ್ಬರೂ ಬೆರಳು ಹೆಣೆಯುತ್ತ, ತುಟಿ ಕಚ್ಚುತ್ತಾ ಸುತ್ತಾಡ ತೊಡಗುವರು]

ನಿನಗೆ ನಾನು ಹೇಳ್ತಿದ್ದೆ, ಇಲ್ಲಿನ ಪ್ರಾದೇಶಿಕತೆಯನ್ನು ತೆಗೆದ್ಕೊಂಡು ಹೋಗ್ಬೇಕೆಂದಿದ್ದೇನೆಂದು. ಇಲ್ಲಿನ ಆವರಣವನ್ನೇ ಅಲ್ಲಿ ಸೃಷ್ಟಿಸಿ, ಅವರಿಗೆ ಅಭಾವದ ಅನುಭವ ಉಂಟಾಗದಂತೆ ಮಾಡುವ ಪ್ರಯತ್ನವಾಗಿರುತ್ತೆ. ಅನೇಕ ಸಲ ಧೈರ್ಯಗೆಡುತ್ತಾರೆ. ಧೈರ್ಯ ಕೆಡುವುದರ ಜೊತೆಗೆ ಶಕ್ತಿ

ಗುಂದುತ್ತಾರೆ. ಇದರಿಂದಾಗಿ ವ್ಯರ್ಥವಾಗಿ ಹಾಳಾಗುತ್ತೆ ಅವರ ಸಮಯ. ಹೀಗಾಗ ಬಾರದೆಂದೇ ನನ್ನಾಸೆ [ಮಲ್ಲಿಕಾಳ ಎದುರು ನಿಲ್ಲುತ್ತಾ] ಅದಕ್ಕಾಗಿಯೇ ಇಲ್ಲಿಂದ ವಸ್ತುಗಳನ್ನು ತೆಗೆದುಕೊಂಡು ಹೋಗಬೇಕೆಂದಿದ್ದೇನೆ. ಇಲ್ಲಿನ ಜಿಂಕೆ ಮರಿಗಳನ್ನು ತೆಗೆದುಕೊಂಡು ಉದ್ಯಾನದಲ್ಲಿ ಸಾಕುತ್ತೇವೆ. ಇಲ್ಲಿನ ಮೂಲಿಕೆಗಳನ್ನು ಉದ್ಯಾನದ ಕ್ರೀಡಾ ಶೈಲದ ಮೇಲೆ ಮತ್ತು ಅಕ್ಕ ಪಕ್ಕದಲ್ಲಿ ಬೆಳೆಸುತ್ತೇವೆ. ಇಲ್ಲಿನ ಹಾಗೇ ಕೆಲವು ಮನೆಗಳನ್ನು ಕಟ್ಟಿಸುತ್ತೇವೆ. ಮಾತುಲನ ಪರಿವಾರವೂ ಅಲ್ಲಿಗೇ ಬರೋದಿದೆ. ಇಲ್ಲಿಂದ ಕೆಲವು ಅನಾಥ ಮಕ್ಕಳನ್ನು ಕರೆದುಕೊಂಡು ಹೋಗಿ ವಿದ್ಯಾಭ್ಯಾಸ ಮಾಡಿಸ್ತೇವೆ. ಆಗಲಾದ್ರೂ ಸ್ವಲ್ಪ ಅವರಿಗೆ ನೆಮ್ಮದಿ ಸಿಗಬಹುದೇನೋ ಅನ್ನೋಭಾವನೆ! [ಸುತ್ತಾಡುತ್ತಾ ಕೋಣೆಯ ಇನ್ನೊಂದು ಬದಿಗೆ ಹೋಗುತ್ತಾಳೆ]

ನಿಮ್ಮ ಮನೆಯಂತೂ ತುಂಬಾ ಜೀರ್ಣಸ್ಥಿತಿಯಲ್ಲಿದೆ. ಇದರ ಉದ್ಧಾರ ಆಗ ಬೇಕಿದೆ. ನೋಡು ನೀನು ಬಯಸೋದಾದ್ರೆ ನಮ್ಮೊಂದಿಗೆ ಬಂದಿರುವ ಉಜ್ಜಯಿನಿಯ ಇಬ್ಬರು ಶಿಲ್ಪಿಗಳಿಗೆ ಹೇಳಿಕಳಿಸ್ತೇನೆ. ಯೋಚನೆ ಮಾಡಿ ಹೇಳು.

[ಮಲ್ಲಿಕಾ ಎದ್ದು ಅವಳಿರುವಲ್ಲಿಗೆ ಬರುವಳು]

ಮಲ್ಲಿಕಾ :- ತಮ್ಮ ಔದಾರ್ಯಕ್ಕೆ ನಾನು ಚಿರಋಣಿ. ಆದ್ರೆ ನಮಗೆ ಇಂಥಾ ಮನೆಗಳಲ್ಲೇ ಇದ್ದು ಅಭ್ಯಾಸವಾಗಿರೋದ್ರಿಂದ ತೊಂದರೇಂತ ನಮಗೇನೂ ಕಾಣೊಲ್ಲ.

ಪ್ರಿಯಂಗು :- ಆದ್ರೂ ಈ ಮನೆಯ ಪುನರುದ್ಧಾರವಾಗ್ಲೇ ಬೇಕಿದೆ. ಅವರ ಪ್ರಾರಂಭದ ಬದುಕೂ ಈ ಮನೆಯೊಂದಿಗೇ ಹೆಣೆದು ಕೊಂಡಿದೆ. ಮಾತುಲನ ಮನೆಯಿರುವೆಡೆ ಈಗೊಂದು ಹೊಸ ಭವನ ನಿರ್ಮಾಣಕ್ಕೆ ಹೇಳಿ ಬಂದಿದ್ದೇನೆ. ಅಲ್ಲದೆ ಶಿಲ್ಪಿಗಳಿಗೆ ಭವನ ನಿರ್ಮಾಣದ ಕಾರ್ಯದ ಮೇಲ್ವಿಚಾರಣೆಗಾಗಿ ಇರೋದಕ್ಕೆ ಕಾಲಾವಕಾಶವಿಲ್ಲದಿರೋದ್ರಿಂದ್ಲೆ ನನ್ಗೆ ದುಃಖವಾಗ್ತಿದೆ. ನಾಳೇನೇ ನಾವು ಇಲ್ಲಿಂದ ಹೊರಡ ಬೇಕೆಂದಿದ್ದೇವೆ. .......ನೀನೂ ಯಾಕೆ ನಮ್ಜೊತೆ ಬರಬಾರ್ದು.

[ಮಲ್ಲಿಕಾ ಏನೂ ಅರಿಯದವಳಂತೆ ಅವಳ ಕಡೆ ನೋಡುವಳು]

ಮಲ್ಲಿಕಾ :- ನಾನು.....?

[ಪ್ರಿಯಂಗು ಹತ್ತಿರ ಬಂದು ಅವಳ ಭುಜಗಳ ಮೇಲೆ ಕೈ ಇಡುವಳು]

ಪ್ರಿಯಂಗು :- ಹೌದು! ಇದ್ರಿಂದ ತೊಂದ್ರೆಯಾದ್ರೂ ಏನು? ಇಲ್ಲಂತೂ ನಿನಗೆ ಯಾವ ಬಂಧನವೂ ಇಲ್ಲ.

ಮಲ್ಲಿಕಾ :- ನನ್ನ ತಾಯಿ ಇದ್ದಾಳೆ.

ಪ್ರಿಯಂಗು :- ನಿಮ್ಮ ತಾಯಿ ಇರೋದ್ರಿಂದ್ಲೇನೂ ತೊಂದ್ರೆ ಇಲ್ಲ. ಆಕೇನೂ ನಿನ್ನ ಜೊತೆ ಬರೋಹಾಗೆ ವ್ಯವಸ್ಥೆ ಮಾಡ್ತೀನಿ. ಇಲ್ಲಿ ಶಿಲ್ಪಿಗಳು ಈ ಮನೇನ ಪುನರುದ್ಧಾರ ಮಾಡ್ತಾರೆ. ನೀನಲ್ಲಿ ನಂಜೊತೆಗೆ ಇರ್ಬಹದು.

ಮಲ್ಲಿಕಾ :- ಕ್ಷಮೆಯಿರಲಿ ಇಂಥ ಗೌರವಕ್ಕೆ ನಾನು ಪಾತ್ರಳಲ್ಲ.

ಪ್ರಿಯಂಗು :- ಆದ್ರೆ ಇದಕ್ಕಿಂತ ಹೆಚ್ಚಿನ ಗೌರವಕ್ಕೆ ನೀನು ಯೋಗ್ಯಳೂಂತ ನಾನು ಭಾವಿಸ್ತೇನೆ. ನಾನು ಬರೋಕೆ ಮೊದ್ಲು ಇಲ್ಲಿಗೆ ಇಬ್ಬರು ಅಧಿಕಾರಿಗಳು ಬಂದಿದ್ದರಲ್ವೆ? [ತುಟಿಯ ಮೇಲೆ ತುಂಟನಗೆ ನಾನು ಅವರನ್ನ ಕೇವಲ ಉಪಚಾರಕ್ಕಾಗಿ ಕಳಿಸ್ಲಿಲ್ಲ. ಅವರಿಬ್ಬರ್ನೂ ನೀನು ನೋಡಿದ್ದೀಯಲ್ವೇ?]

ಮಲ್ಲಿಕಾ :- [ಅವಳ ಮಾತಿನ ಅರ್ಥವನ್ನು ಗ್ರಹಿಸಲು ಪ್ರಯತ್ನಿಸಿ ಸೋತವಳಂತೆ] ನೋಡಿದ್ದೀನಿ.

ಪ್ರಿಯಂಗು :- ಅವರಿಬ್ಬರಲ್ಲಿ ನಿನಗೆ ಯಾರು ಒಪ್ಪಿಗೆಯಾದ್ರೂ ಅವರೊಂದಿಗೇ ಬೇಕಾದ್ರೆ ನಿನ್ನ ಮದುವೆ ಏರ್ಪಾಟನ್ನೂ ಮಾಡ್ತೇವೆ. ಇಬ್ಬರೂ ತುಂಬಾ ಯೋಗ್ಯರು.

ಮಲ್ಲಿಕಾ :- ದೇವಿ! [ಭೂರ್ಜ ಪತ್ರಗಳನ್ನು ಎದೆಗಪ್ಪಿಕೊಂಡು ಕೆಲ ಹೆಜ್ಜೆ ಆಸನದ ಕಡೆ ಸರಿಯುವಳು. ಪ್ರಿಯಂಗು ಅವಳತ್ತ ತೀಕ್ಷ್ಣವಾಗಿ ನೋಡುವಳು. ನಂತರ ನಿಧಾನವಾಗಿ ಅವಳ ಬಳಿಗೆ ಹೋಗುವಳು]

ಪ್ರಿಯಂಗು :- ಒಂದು ವೇಳೆ, ಇವರಿಬ್ಬರೂ ನಿನಗೆ ಒಪ್ಪಿಗೆ ಯಾಗದಿದ್ರೆ ನಮ್ಮ ರಾಜ್ಯದಲ್ಲಿ ಅಧಿಕಾರಿಗಳಿಗೆ ಕೊರತೇನೇ ಇಲ್ಲ. ನೀನು ನನ್ನೊಂದಿಗೆ ಬರೋದಿದ್ರೆ, ನಿನಗೊಪ್ಪಿದವರನ್ನೇ....

[ಮಲ್ಲಿಕಾ ಪೀಠದ ಮೇಲೆ ಕುಳಿತು ಕೊಳ್ಳುವಳಲ್ಲದೆ, ನೋವಿನಿಂದ ತುಂಬಿ ಬಂದ ಆವೇಶದಲ್ಲಿ ತುಟಿ ಕಡಿಯುವಳು]

ಮಲ್ಲಿಕಾ :- ಇನ್ನು ದಯವಿಟ್ಟು ಈ ಮಾತನ್ನು ನಿಲ್ಲಿಸಿ.

[ಧ್ವನಿಯಲ್ಲಿ ಅಸ್ಪಷ್ಟತೆ, ಒಳಗೆ ಬಾಗಿಲು ತೆರೆದುಕೊಂಡು. ಅಂಬಿಕೆ ಕಾಹಿಲೆ ಮತ್ತು ಆವೇಶದಿಂದ ಜರ್ಝರಿತಳಾಗಿ ನಡುಗುತ್ತಾ ಒಂದು ಹೆಜ್ಜೆ ಹೊರಗೆ ಬಂದು, ಮತ್ತೆ ತನ್ನನ್ನು ಸುಧಾರಿಸಿ ಕೊಳ್ಳುವಂತೆ ನಿಲ್ಲುವಳು. ಪ್ರಿಯಂಗು ನಡೆದು ಮಲ್ಲಿಕಾಳ ಸಮೀಪಕ್ಕೆ ಬರುವಳು.]

ಪ್ರಿಯಂಗು :- ಯಾಕೆ? ನೀನೂ, ನಿನ್ನ ಮನೆ ಇರ್ಬೇಕೂನ್ನೋ ಆಸೆಯಿಲ್ವೆ?

[ಅಂಬಿಕೆ ನಿಧಾನವಾಗಿ ಅವರ ಬಳಿಗೆ ಬರುವಳು]

ಅಂಬಿಕಾ :- ಇಲ್ಲ, ಅವಳ ಮನಸ್ಸಿನಲ್ಲಿ ಯಾವುದರ ಆಸೆಯೂ ಇಲ್ಲ.

[ಪ್ರಿಯಂಗು ಹಿಂತಿರುಗಿ ಅವಳ ಕಡೆ ನೋಡವಳು. ಮಲ್ಲಿಕಾ ಗಾಭರಿಯಿಂದ ಎದ್ದು ನಿಲ್ಲುವಳು]

ಮಲ್ಲಿಕಾ :- ಅಮ್ಮಾ!

ಅಂಬಿಕೆ :- ಭಾವನೆಯಿಂದ್ಲೇ ಬದುಕೋವ್ಳು ಇವ್ಳು. ಇವಳ ಮನಸ್ಸಿನಲ್ಲಿ ಇದರ ಯೋಚ್ನೇಯೇ ಇಲ್ಲ.
ಇವ್ಳಿಗೆ ಬದುಕಿನಲ್ಲಿ....

[ಉಸಿರಾಟ ತೀವ್ರವಾಗುವುದರಿಂದ ಮಾತು ಗಂಟಲಲ್ಲಿಯೇ ಉಳಿಯುವುದು. ಮಲ್ಲಿಕಾ ಭೂರ್ಜ ಪತ್ರಗಳನ್ನೆಲ್ಲಾ ಆಸನದ ಮೇಲೆ ಬಿಟ್ಟು ಅವಳ ಬೆನ್ನಿಗೆ ಆಧಾರ ನೀಡುವಳು]

ಮಲ್ಲಿಕಾ :- ನೀನ್ಯಾಕಮ್ಮಾ ಎದ್ದು ಬಂದೀ? ಮೊದ್ಲೇ ಆರೋಗ್ಯ ಸರಿಯಿಲ್ಲ. ನಡೀಮ್ಮ ಮಲಕ್ಕೊಳ್ಳುವಂತೆ.

[ಅವಳನ್ನು ಒಳಗೆ ಕರೆದೊಯ್ಯಲು ಪ್ರಯತ್ನಿಸುವಲ್ಲಿ ಅಂಬಿಕೆ ಅವಳ ಕೈ ಕೊಡವಿ ದೂರಸರಿಯುವಳು]

ಅಂಬಿಕೆ :- ನಾನು ಬಂದವರ್ನ ಯಾರ್ನೂ ಮಾತಾಡಿಸಬಾರ್ದೇನು? ದಿನ, ತಿಂಗಳು ವರ್ಷವೆಲ್ಲಾ ಈ ನರಳಾಟದಲ್ಲೇ ಕಳೀ ಬೇಕೂಂತಿಯೇನು? ನನ್ನ ಪಾಲಿಗೆ ಇದು ಮನೆಯಲ್ಲ! ಕತ್ತಲೆ ಗವಿ ಇದೇ ನನ್ನ ಸೆರೆಮನೆ...ನಾನು ಯಾರ ಹತ್ರ ಮಾತಾಡೋದು ನಿನಗಿಷ್ಟ ಹೇಳು....

[ನಡೆಯುವ ಪ್ರಯತ್ನದಲ್ಲಿ ಬೀಳುವಂತಾಗುವುದು. ಮಲ್ಲಿಕಾ ಅವಳನ್ನು ಹಿಡಿದುಕೊಳ್ಳುವಳು]

ಮಲ್ಲಿಕಾ :- ಆದ್ರೆ ನಿನ್ನಾರೋಗ್ಯಾನೇ ಸರಿಯಿಲ್ವಲ್ಲಾಮ್ಮಾ!

ಅಂಬಿಕಾ :- ನನಗೇನು? ನಿನಗಿಂತ ನಾನೇ ಹೆಚ್ಚು ಆರೋಗ್ಯವಾಗಿದ್ದೀನಿ.

[ಪ್ರಿಯಂಗುವಿನ ಬಳಿಗೆ ಹೋಗಿ ನಿರೀಕ್ಷಣಾ ದೃಷ್ಟಿಯಿಂದ ನೋಡುವಳು]

ಈ ಮನೇ ಸ್ಥಿತಿ ಯಾವಾಗ್ಲೂ ಹೀಗೇ ಇರಲಿಲ್ಲ ರಾಜವಧು. ನನ್ನ ಕೈ ಕಾಲು ಗಟ್ಟುಮುಟ್ಟಯಾಗಿರೋ ತನ್ಕ ಪ್ರತಿದಿನ ಗುಡ್ಸಿ, ಸಾರಿಸಿ, ಓರಣವಾಗಿ ಇಡ್ತಿದ್ದೆ. ವಸ್ತುಗಳೆಲ್ಲಾ ಹೀಗೇ ಚೆಲ್ಲಾಪಿಲ್ಲಿಯಾಗಿ ಮುರಿದು ಬಿದ್ದಿರೋ

ಹಾಗೆ ಇವೂ ಬಿದ್ಕೊಂಡಿವೆ. ಯಾಕಂದ್ರೆ....

[ಮತ್ತೆ ಕೆಮ್ಮು ಉಸಿರು ಕಟ್ಟುವುದು. ಮಾತು ಕಷ್ಟವಾಗುವುದು. ಪ್ರಿಯಂಗು ಕೋಣೆಯನ್ನು ನೋಡುವ ನೆವದಿಂದ, ಅವಳಿಂದ ದೂರ ಸರಿಯುವಳು.]

ಪ್ರಿಯಂಗು :- ಮನೇ ಸ್ಥಿತಿ ಚೆನ್ನಾಗಿಲ್ಲಾನ್ನೋದ್ನ ನಾನು ನೋಡ್ತಿದ್ದೀನಿ. ಅದಕ್ಕೆ ಮಲ್ಲಿಕಾ ನನ್ನೊಂದಿಗೆ ಬರೋದಾದ್ರೆ, ಈ ಎಲ್ಲಾ ಸಮಸ್ಯೆಗೆ ಪರಿಹಾರ ದೊರಕುತ್ತೆ. ಆದ್ರೆ ಈಗ.....

[ತನ್ನ ತುಟಿ ಕಡಿಯುತ್ತಾ ಕ್ಷಣಕಾಲ ಯೋಚಿಸುತ್ತಾ ನಿಲ್ಲುವಳು]

ಈಗ್ಲೂ ಸಾಧ್ಯವಾದ್ದನ್ನೇ ಮಾಡಿ ಹೋಗ್ತೇನೆ. ಶಿಲ್ಪಿಗಳಿಗೆ ಈ ಮನೇನ ಕೆಡವಿ, ಈ ಸ್ಥಳದಲ್ಲಿ..... [ಮಲ್ಲಿಕಾ ಬೆಚ್ಚುವಳು]

ಮಲ್ಲಿಕಾ :- ಹಾಗ್ಮಾತ್ರಾ ಮಾಡ್ಬೇಡಿ. ಈ ಮನೆ ಕೆಡ್ವೋದ್ಕೆ ಹೇಳ್ಬೇಡಿ.

[ಪ್ರಿಯಂಗು ಅವಳತ್ತ ಮತ್ತೆ ತೀಕ್ಷ್ಣವಾಗಿ ನೋಡುವಳು]

ಪ್ರಿಯಂಗು :- ನಿನ್ನ ಅನುಕೂಲಕ್ಕೇಂತ್ಲೇ ಹೇಳ್ದೆ. ಇಷ್ಟವಿಲ್ಲದಿದ್ರೆ ಸರಿ. ಅವರಿಗೆ ನಾನು ಏನೂ ಹೇಳೊಲ್ಲ. ಆದರೂ ನೀನ್ಗೆನಾದ್ರೂ ಮಾಡ್ಲೇ ಬೇಕೂಂತ ನನ್ನ ಮನ್ಸು. ಈಗಂತು ನನಗೆ ಇರೋಕೆ ಅವಕಾಶವಿಲ್ಲ. ನಾಳೆ ಹೊರಡೋಕೆ ಮೊದ್ಲೇ ಎಲ್ಲಾ ಕೆಲ್ಸ ಆಗ್ಬೇಕಿದೆ. ಇದಕ್ಕೂ ಈಗ ವೇಳೆಯಿರಲಿಲ್ಲ. ಆದ್ರೂ ಇಲ್ಲಿಗೆ ಬರೋದು ಅಗತ್ಯಾಂತ ಭಾವಿಸ್ದೆ. ಅವರು ಪರ್ವತ ಶಿಖರಗಳಲ್ಲಿ ಸುತ್ತಾಡಲು ಹೊರಟಿದ್ದರು.
ಈ ಮಧ್ಯೆ ನಾನಿಲ್ಲಿ ಬಂದೆ.

[ಮಲ್ಲಿಕಾಳ ದೃಷ್ಟಿ ಕೆಳ ಮುಖವಾಗುವುದು. ಅಂಬಿಕೆ ಅದೇ ಆವೇಶದಲ್ಲಿ ಪ್ರಿಯಂಗು ಕಡೆಗೆ ಎರಡು ಹೆಜ್ಜೆ ಮುಂದೆ ಬರುವಳು]

ಅಂಬಿಕೆ :- ರಾಜವಧೂ, ನಾನು ನಿನಗೊಂದು ವಿಷಯ ತಿಳಿಸಿ ಹೇಳ್ಬೇಕೂಂತಿದ್ದೆ. ನಾವು.... ನಾವು

[ಕೆಮ್ಮುವಳು ಮಾತು ಕಷ್ಟವಾಗುವುದು ಪ್ರಿಯಂಗು ಬಾಗಿಲಿಂದ ತಿರುಗುವಳು]

ಪ್ರಿಯಂಗು :- ನಿಮ್ಮ ಕಷ್ಟವೇನೂನ್ನೋದು ಗೊತ್ತಿದೆ. ನನ್ನ ಕೈಲಾದ ಸಹಾಯಾನ ಮಾಡಿಯೇ ಮಾಡ್ತೇನೆ.....
ಸೇವಕರು ನನ್ನ ನಿರೀಕ್ಷೆಯಲ್ಲಿರಬಹುದು. ಅದ್ಕೆ......

[ಹೆಮ್ಮೆಯಿಂದ ಗಂಭೀರದ ನಗೆ ನಗುತ್ತಾ ಮಲ್ಲಿಕಾಳ ಕಡೆ ನೋಡಿ ನಿಧಾನವಾಗಿ

ಹೊರಡುವಳು. ಅಂಬಿಕೆ ಆವೇಶ ಮತ್ತು ನಿಃಶಕ್ತಯಿಂದ ಅವಳು ಹೋದತ್ತಲೇ ನೋಡುವಳು. ಬೀಳುತ್ತಾ ಹೋಗಿ ಆಸನದ ಮೇಲೆ ಚದುರಿಬಿದ್ದಿದ್ದ ಪುಟಗಳನ್ನಾಯ್ದು ಮಲ್ಲಿಕಾಳ ಕಡೆ ನೀಡುವಳು]

ಅಂಬಿಕೆ :- ತೊಗೋಮ್ಮ ಮೇಘದೂತದ ಸಾಲುಗಳ್ನ ಓದು. ಇದರಲ್ಲಿಯೇ ಅಲ್ವೆ ಅವನ ಮನಸ್ಸಿನ ಮೃದುತೆ ಮೈತಾಳಿದೇಂತ ಹೇಳ್ತಿದ್ದುದು. ನೋಡು, ಇವತ್ತು ಇನ್ನೂ ಹೆಚ್ಚಿಗೆ ಮೃದುತೆ ಮೈ ತಾಳಿದೆ.

[ಮಲ್ಲಿಕಾ ಮೋಸ ಹೋದವಳಂತೆ ಅವಳ ಕಡೆ ನೋಡುವಳು]

ಈ ದಿನ ನಿನ್ನ ಭಾವನೆಗೆ ಸರಿಯಾದ ಬೆಲೇನ ಕೊಡ್ಬೇಕಂತಿದ್ದಾನೆ. ತೊಗೋಬಾರ್ದೇಕೆ? ಮನೆ ಗೋಡೆಗಳ ಉದ್ಧಾರವಾಗುತ್ತೆ! ಅವಳಿಗೆ ಆಳಾಗಿ ನೀನೂ ಅಲ್ಲಿರಬಹುದು. ಇದಕ್ಕಿಂತ ಹೆಚ್ಚಿನದೇನು ಬೇಕು ಅಲ್ವೆ?

ಮಲ್ಲಿಕಾ :- ಅಮ್ಮಾ, ಇದು ಅವಳ ದೃಷ್ಟಿ. ಅವಳ ದೃಷ್ಟಿಗೆ ಬೇರೆಯವರ್ನೇಕೆ ಹೊಣೆ ಮಾಡ್ತಿ?

ಅಂಬಿಕೆ :- ಹಾಗಾದ್ರೆ, ಅವಳಿಲ್ಲಿ ಬರೋಹಾಗೆ ಮಾಡಿದ ಹೊಣೆ ಯಾರ್ದು? ಬಲವಂತವಿಲ್ಲದೆ ಬಂದಿಲ್ಲಾನ್ನೋಕೆ ಇದಕ್ಕಿಂತ ಹೆಚ್ಚಿನ ಪುರಾವೆ ಬೇಕೆ? ರಾಜ್ಯದ ಶಿಲ್ಪಿಗಳು ಮುರಿದಿರೋ ಗೋಡೆಗಳ್ನ ಉದ್ಧಾರ ಮಾಡ್ತಾರೆ!... ಹೌದು ಅವ್ನು ಇವತ್ತು ಯಜಮಾನ. ಸಾಕಷ್ಟು ಸಂಪತ್ತಿದೆ. ಅವನಿಗಿರೋ ಅಧಿಕಾರ ಐಶ್ವರ್ಯದ ಮೆರೆದಾಟಕ್ಕೆ ಇದಕ್ಕಿಂತ ಬೇರೆ ಉಪಾಯವೇನು?

ಮಲ್ಲಿಕಾ :- ಅಮ್ಮಾ!

ಅಂಬಿಕೆ :- ಅಮ್ಮನಿಗೆ ಏನೂ ತಿಳಿಯೊಲ್ಲ.... ಹೌದು ಅಮ್ಮನಿಗೆ ಏನೂ ತಿಳಿಯೊಲ್ಲ. ಅವಳು ನಿನ್ನ ಭಾವನೆಯ ಆಳಕ್ಕೆ ಇಳಿಯೊಲ್ಲ.

[ಕೆಮ್ಮಿನಿಂದಾಗಿ ಮಾತಲಾಡಲಾಗುವುದಿಲ್ಲ. ವಿಲೋಮನ ಪ್ರವೇಶ]

ವಿಲೋಮ:- ಹೀಗ್ಯಾಕೆ ಕೂತಿದ್ದಿ ಅಂಬಿಕಾ? ಇಡೀ ಹಳ್ಳಿ ಇವತ್ತು ನಿನ್ನ ಭಾಗ್ಯಾನ ಕೊಂಡಾಡ್ತಿದೆ.

[ಅರ್ಥಪೂರ್ಣವಾಗಿ ಮಲ್ಲಿಕಾಳನ್ನು ನೋಡುವನು. ಅವನ ಕಣ್ಣು ತಪ್ಪಿಸಿ ದೂರ ಸರಿಯುವಳು]

ರಾಜರ ಧೂಳು ಬಿದ್ದರೇನೇ ಗೌರವಾಂತ ಭಾವಿಸ್ತಾರೆ ಜನ! ಇಂಥಾ ಅವಕಾಶ ಎಲ್ರಿಗೂ ಎಲ್ಲಿ ಸಿಕ್ಕುತ್ತೆ?

ಅಂಬಿಕೆ :- ಹೌದೌದು ಇಂಥಾ ಅವಕಾಶಾನೇ ನೋಡ ಬೇಕೂಂತ ಇಷ್ಟೂದಿನ ಬದುಕಿದ್ದೆ. ಇಂಥಾ ಭಾಗ್ಯ ನಮ್ಮಂಥೋರಿಗೆ, ಅಲ್ಪರಿಗೆ ದೊರೆಯೋದಾದ್ರೂ ಎಲ್ಲಿ? [ಎದ್ದು ನಿಲ್ಲುವಳು] ನಡೀ ನಾನೇ ಇದನ್ನ ಹಳ್ಳೀಲಿ ಸಾರಿಬರ್ತೇನೆ. ವರ್ಷಾನು ವರ್ಷಗಳ ನಮ್ಮ ಬಡತನ, ದುಃಖ, ಎಂಥಾ ಒಳ್ಳೇ ಪ್ರತಿಫಲವನ್ನು ತಂದಿದೆ!!

ಶಿಲ್ಪಿಗಳು ಈ ಮನೆ ಗೋಡೆಗಳ ಉದ್ಧಾರ ಮಾಡ್ತಾರೆ !!!

ವಿಲೋಮ:- ಕೂತ್ಕೋ ಅಂಬಿಕಾ. ನಿನ್ನ ಮಾತನ್ನ ಕೇಳೋಕೆ ಹಳ್ಳೀಲಿಯಾರಿಗೂ ಪುರುಸೊತ್ತಿಲ್ಲ [ಸುತ್ತಾಡುತ್ತಾ ಕಿಟಕಿಯ ಬಳಿಗೆ ಬರುವನು] ಹಳ್ಳಿಗರು ತಮ್ಮ ತಮ್ಮ ಕೆಲ್ಸದಲ್ಲಿ ತಾವಿದ್ದಾರೆ. ಹೊರಗಿನಿಂದ ಬಂದ ಆತಿಥಿಗಳಿಗೆ ಎಷ್ಟೋ ವಸ್ತು ಸಾಮಗ್ರಿಗಳ್ನ ಒದಗಿಸಿ ಕೊಡಬೇಕಾಗಿದೆ. ಅತಿಥಿಗಳಾದ್ರೂ ಇಲ್ಲಿನ ಕಲ್ಲುಗಳ್ನೂ ಬಾಚ್ಕೊಂಡು ಹೋಗ್ಬೇಕೂಂತಿದ್ದಾರೆ. ಇಲ್ಲಿನ ಈ ಕಲ್ಲುಗಳಿಗೆ ಅಮೂಲ್ಯ ಬೆಲೆ ಬಂದಿದೆ.

[ಸಾಭಿಪ್ರಾಯದಿಂದ ಮಲ್ಲಿಕಾಳ ಕಡೆ ನೋಡುವನು]

ಮಲ್ಲಿಕಾ :- ಇಲ್ಲಿನ ಶಿಲೆಗಳು ಎಂದಿನಿಂದ್ಲೂ ಗುರುತಿಸಿರಲಿಲ್ಲ !!

[ಅಂಬಿಕೆ ಆವೇಶದಿಂದ ಕೆಲ ಹೆಜ್ಜೆ ಅವಳ ಹತ್ತಿರ ಬರುವಳು]

ಅಂಬಿಕೆ :- ಹಾಗಾದ್ರೆ ನೀನೂ ಯಾಕೆ ಹೋಗಿ ಬಾಚ್ಕೊಳ್ಳೊಲ್ಲ.

ಇವರೇನಾದ್ರೂ ಒಂದ್ವೇಳೆ ಎಲ್ಲಾನೂ, ಒಂದೂ ಬಿಡ್ದೆ ಆರಿಸಿಕೊಂಡೋದ್ರೆ ನಿನ್ನ ಪಾಲಿಗೆ ಏನೂ ಉಳಿಯೊಲ್ಲ. ನಿನ್ನ ಭಾವನೆಗೆ ಆಧಾರಾನೇ ಇಲ್ದೆ ಹೋಗ್ಬಹುದು.

ಮಲ್ಲಿಕಾ :- ಕೂತ್ಕೋಮ್ಮ ! ನಿನಗೆ ಮೈ ಸರಿಯಿಲ್ಲ.

[ತೋಳ್ಹಿಡಿದು ಅವಳನ್ನು ಆಸನದ ಮೇಲೆ ಕೂಡಿಸುವಳು]

ವಿಲೋಮ:- ಹಳ್ಳೀಲಂತೂ, ಎಲ್ಲೆಲ್ಲೂ ಸಂತೋಷ್ವೋ ಸಂತೋಷ! ಅವರ ಜೀವನದಲ್ಲಿ ಇದಕ್ಕಿಂತ ಹೆಚ್ಚಿನ ಸಂತೋಷದ ದಿನ ಕಾಣಸಿಕ್ಕಿಲ್ಲ. ಪಶುಗಳ ಬಗ್ಗೆ ಈಗ ಜನಕ್ಕೆ ಯಾವ ಯೋಚ್ನೇನೂ ಇಲ್ಲ. ಬಂದಿರುವ ಅತಿಥಿಗಳಿಗೆ ಭೋಜನ ಸಾಮಾಗ್ರಿಗಳನ್ನ. ಪೇಯವಸ್ತುಗಳನ್ನು ಒದಗಿಸಿ ಕೋಡೋ ದ್ರಲ್ಲಿದ್ದಾರೆ. ರಾಜ ಕನ್ಯೆಯ ವಿಶೇಷ ಅಪ್ಪಣೆಯ ಮೇರೆಗೆ ಭೋಜ್ಯಗಳಲ್ಲಿ ಹರಿಣಮರಿಗಳೂ ಉಂಟು.

ಮಲ್ಲಿಕಾ :- ಇದಂತೂ ನಿಜಾ ಅಲ್ಲ

ವಿಲೋಮ:- ಇದೂ ನಿಜಾಲ್ವ? ಇಂದ್ರವರ್ಮ, ವಿಷ್ಣುದತ್ತರಿಗೆ ರಾಜಕನ್ಯೆಯೇ ಸ್ವತಃ ಅಪ್ಪಣೆಕೊಡಿಸಿದ್ದಾಳೆ.

ಮಲ್ಲಿಕಾ :- ಹಾಗೆ ಅಪ್ಪಣೆ ಕೊಡ್ಸೋದ್ರಲ್ಲಿ ಬೇರೆ ಅರ್ಥವೂ ಇರ್ಬಹುದು.

ವಿಲೋಮ:- ಬೇರೆ ಅರ್ಥ? ಇನ್ನೇನಿದೆ ? ರಾಜಕನ್ಯೆ ಮರಿಹರಿಣಗಳೊಂದಿಗೆ ಆಟವಾಡ್ತಾಳೇನು? ಇಲ್ಲಾ..... ಉಜ್ಜಯಿನಿಯ ಕಲಾವಿದರು ಅವುಗಳ ಚಿತ್ರಗಳ್ನೇನಾದರೂ ಬಿಡಿಸ್ತಾರೇನು? ಇನ್ನೊಂದು ಮೋಜಿನ ವಿಷಯಾಂದ್ರೆ, ರಾಜಧಾನಿಯಿಂದ ಬಂದಿರೋ ಚಿತ್ರಕಾರರು ಇಲ್ಲಿಯ ಪ್ರತಿಯೊಂದು ವಸ್ತುವಿನ ಚಿತ್ರವನ್ನು ಬಿಡಿಸ್ತಾ ಬಿಡಿಸ್ತಾ ಅಲೆದಾಡ್ತಿದ್ದಾರೆ. ಅವರು ಚಿತ್ರಗಳ್ನ ಬಿಡಿಸ್ದೆ ಬಿಟ್ಟಿರೋ ಒಂದು ಮರವಾಗ್ಲೀ, ಹುಲ್ಲಾಗ್ಲೀ ಉಳಿದಿಲ್ಲ.

ಮಲ್ಲಿಕಾ :- ಇದಕ್ಕೂ ಏನಾದ್ರೂ ಒಂದು ಬೇರೆ ಅರ್ಥವಿರ್ಲೇಬೇಕು.

[ವಿಲೋಮ ಕಿಟಿಕಿಯಿಂದ ಇವಳಿರುವೆಡೆಗೆ ಬರುವನು]

ವಿಲೋಮ:- ಇದಕ್ಕೆ ಅರ್ಥವಿಲ್ಲಾಂತಂದ್ನೇ? ಅರ್ಥವಂತೂ ಸ್ಪಷ್ಟವಾಗೇ ಇದೆ. ಇಲ್ಲಿನ ವಸ್ತುಗಳ್ನ ವಿಚಿತ್ರ ದೃಷ್ಟಿಯಿಂದ ನೋಡೋದಲ್ದೆ ಬೇರೆಯವರಿಗೂ ಆ ವೈಚಿತ್ರ್ಯಾನ ತೋರ್ಸೋಕೆ ಇಷ್ಟಪಡ್ತಾರೆ. ನೀನು, ನಾನು, ಈ ಮನೆ, ಬೆಟ್ಟ ಎಲ್ಲವೂ ಅವರಿಗೆ ವಿಚಿತ್ರವಾಗೇ ಕಾಣುತ್ತೆ. ನಾನಂತೂ ನಿಜವಾಗ಼್ಲೂ ಸಾಮಾನ್ಯ ವಸ್ತುಗಳಲ್ಲಿಯೂ ವೈಚಿತ್ರ್ಯವನ್ನು ಕಾಣುವ ಅವರ ವಿಶೇಷ ದೃಷ್ಟೀನಂತೂ, ಖಂಡಿತಾ ಮುಕ್ತ ಮನಸ್ಸಿನಿಂದ ಹೊಗಳ್ತೇನೆ.... ನಾನು ಒಬ್ಬ ಚಿತ್ರಕಾರ ಇಲ್ಲಿನ ಬಿಸಿಲಲ್ಲಿ ಕೂತು ತನ್ನ ಪ್ರತಿಬಿಂಬದ್ದೇ, ಚಿತ್ರ ಬಿಡಿಸೋದನ್ನೂ ನೋಡ್ದೆ.

ಅಂಬಿಕೆ :- ಇಲ್ಲಿನ ಬಿಸಿಲಲ್ಲಿ, ತಮ್ಮ ನೆರಳೇ ಬೇರೆಯವರ ನೆರಳಾಗಿಯೂ ಬಹುಶಃ ಕಂಡಿರಬೇಕು. ಯಾವ ಪ್ರಾಣಿಯ ನೆರಳನ್ನಾದ್ರೂ ಹಿಡೀತಿದ್ದ ಆ ರಾಕ್ಷಸಿ ಹೆಸ್ರೇನು? [ಮಾತಾಡ್ತಾ ಏರುಸಿರಿಡುವಳು] ನನಗನ್ನುತ್ತೆ.... ನಾನೂ ಆ ರಾಕ್ಷಸಿಯಾಗಿದ್ದಿದ್ರೆ, ಈ ದಿನ ನಾನೂ ಸಹ..... ನಾನೂ ಸಹ....

[ಕೆಮ್ಮಿನಿಂದ ಮಾತು ಮರೆಯಾಗುವುದು]

ಮಲ್ಲಿಕಾ :- [ಹತ್ತಿರ ಬಂದು ಭುಜ ಹಿಡಿದುಕೊಳ್ಳುತ್ತಾ] ನೀ ಸ್ವಲ್ಪ ವಿಶ್ರಾಂತಿ ತಗೋಂತ ಹೇಳಿದ್ನಲ್ಲಮ್ಮ! ಸುಮ್ಮನೆ ಮಾತಾಡ್ಬೇಡ.... ಆರ್ಯ ವಿಲೋಮರೆ ತಾಯಿ ಆರೋಗ್ಯ ಸರಿಯಿಲ್ಲ. ದಯವಿಟ್ಟು, ಆಕೆಗೆ, ವಿಶ್ರಾಂತಿ ತಗೊಳ್ಳೋಕೆ ಅವಕಾಶ ಕೊಡಿ.

ವಿಲೋಮ:- ಹೌದು, ಅವಳ್ನ ಒಳಗೆ ಕರ್‍ಕೊಂಡು ಹೋಗು. ಇಲ್ಲಿ ಹಳ್ಳೀಲಿ ನಡೆಯೋ ಉತ್ಸವದ ಗಲಾಟೆಯಿಂದ ಆಕೆ ಮನಸ್ಸು ಇನ್ನೂ ಕೆಡ್ಬಹ್ದು. ನಾನು ಈ ಉತ್ಸವದ ವಿಷಯ ಹೇಳೋಣಾಂತ ಮಾತ್ರಾ ಬಂದೆ... ಆಶ್ಚರ್ಯ! ಕಾಳಿದಾಸ ಊರಿಗೆ ಬಂದಿದ್ರೂ, ಇಲ್ಲಿಗೆ ಬರ್‍ದಿರೋದು ನಿಜವಾಗ್ಲೂ ಆಶ್ಚರ್ಯ!.... ನಾಳೇನೇ ಅವ್ರು ಹೊರಟು ಹೋಗ್ತಾರೇಂತ್ಲೂ ಕೇಳ್ದೆ.

ಅಂಬಿಕೆ :- ಅಂಬಿಕೆ ಇನ್ನೂ ಬದುಕಿರೋದ್ರಿಂದ, ಇಲ್ಲಿ ಬರೋದು ಸರಿಯಿಲ್ಲಾಂತ ತಿಳಿದಿರ್‍ಬೇಕು!

ವಿಲೋಮ:- ಅವನೊಮ್ಮೆ ಖಂಡಿತ ಬಂದೇ ಬರ್‍ತಾನೇಂತ ಅನ್ಸತ್ತೆ. ಅನ್ನೋದೇನು ಒಬ್ಬ ಮನುಷ್ಯ ಇಷ್ಟು ಸುಲಭವಾಗಿ ಇತರ ವ್ಯಕ್ತಿಗಳೊಡನೆ ಇರೋ ಸಂಬಂಧ ಬಂಧನಾನ ಕಳಚ್ಕೊಳ್ಳೋಕಾಗಲ್ಲ.

[ಮತ್ತೆ ತಿರುಗುತ್ತಾ ಕಿಟಕಿಯ ಬಳಿ ಹೋಗುವನು]

ಅಲ್ದೇ ಕವಿಯ ಭಾವುಕ ಹೃದಯ ಪಡ್ದಿರೋ ಒಬ್ರು! ನೀನೇನಂತಿ ಮಲ್ಲಿಕಾ!.....

ಅವ್ನು ಒಮ್ಮೆ ಬರಲೇ ಬೇಕಲ್ವೆ?

ಮಲ್ಲಿಕಾ :- ಅಮ್ಮಂಗೆ ವಿಶ್ರಾಂತಿ ತಗೊಳ್ಳೋಕೆ ಸ್ವಲ್ಪ ಅವಕಾಶ ಕೊಡಿ ಆರ್ಯ ವಿಲೋಮ! ನಿಮ್ಮ ಮಾತಿನಿಂದ ತಾಯಿಯ ಮನಸ್ಸಿಗೆ ತುಂಬಾ ನೋವಾಗಿದೆ.

ವಿಲೋಮ:- ಏನು ನನ್ನ ಮಾತಿಂದ ಮನಸ್ಸಿಗೆ ನೋವಾಗಿದೆಯೇ? ಆ ನೋವಿಗೆ ಬೇರೆ ಕಾರಣಗಳಿವೆ. ಅಂಬಿಕೆ ನಿನ್ನ ಮನಸ್ಸಿಗೆ ಯಾವ ಕಾರಣದಿಂದ ನೋವಾಗಿದೆ ಗೊತ್ತೇ.

[ಕಿಟಕಿಯಿಂದ ಹೊರಗೆ ನೋಡುವನು]

ನಿನಗೂ ಆ ಕಾರಣಗಳು ಗೊತ್ತಿವೆ.... ಅವಳಾದ್ರೋ ಅವುಗಳ್ನ ಮನಸ್ಸಿನಲ್ಲಿಟ್ಕೊಂಡು ಕೊರಗ್ತಿದ್ದಾಳೆ. ಅವಳ ಮನಸ್ಸಿನಲ್ಲಿ ಕೊರೀತಿರೋ ವಿಷಯಗಳ್ನ ಬೇಕಾದ್ರೆ ಹೇಳಿ ಬಿಡ್ತೇನೆ. [ತಿರುಗಿ ಮಲ್ಲಿಕಾಳ ಕಡೆ ನೋಡುವನು.] ನಾನಿಲ್ಲಿರೋದು ನಿನ್ನ ಮನಸ್ಸಿಗಾಗೊಲ್ಲಾನ್ನೋದು ನನಗೆ ಗೊತ್ತುಂಟು. ಇದೇನೂ ಹೊಸ್ದಲ್ಲ. ಆದ್ರೂ ಸ್ವಲ್ಪ ಗೊತ್ತಿರ್‍ಬೇಕೂನ್ನೋ ಆಸೆ [ಮತ್ತೆ ಹೊರಗೆ ನೋಡುವನು] 'ಪರ್ವತ ಶಿಖರದ ಕಡೆಯಿಂದ ಒಬ್ಬ ಕುದುರೆ

ಸವಾರ ಬರೋದ್ನ ಕಂಡೆ. ಬಹುಶಃ ಒಂದೆರಡು ಕ್ಷಣ ಇಲ್ಲಿ ನಿಲ್ಬೇಕೂಂತ ಇಷ್ಟ ಪಡ್ತಿರಬಹುದು. ಅವನ್ಜೊತೆ ನಾನೂ ಕ್ಷೇಮ ಸಮಾಚಾರ ಕೇಳ್ದೆ.... ನನಗೂ ಅವನ್ಗೂ ತುಂಬಾ ಹಳೇಸ್ನೇಹ.

[ಮಲ್ಲಿಕಾ ಸ್ವಾಧೀನತೆಯನ್ನು ಕಳೆದು ಕೊಳ್ಳುವಳು]

ಮಲ್ಲಿಕಾ :- ಆರ್ಯ ವಿಲೋಮರೇ, ಆ ಸಮಯದಲ್ಲಿ ತಾವಿಲ್ಲಿರೋದು ಸ್ವಲ್ಪಾನೂ ಒಳ್ಳೇದಲ್ಲ. ಅವರ್ನ ಮಾತಾಡ್ಸೋಕೆ ಇದೊಂದೇ ಸ್ಥಳವಲ್ಲ.

ವಿಲೋಮ:- [ಅದೇ ರೀತಿ ಹೊರಗೆ ನೋಡುತ್ತ] ಈ ಸ್ಥಳವೇನಾಗಿದೆ? ಅವರು ಹೋಗೋಕ್ಮುಂಚೆ ಇಲ್ಲೇ ಬೇಟಿಯಾಗಿದ್ದೆವು. ಎಷ್ಟೋವರ್ಷಗಳ ಮೇಲೆ ಈಗ ಮತ್ತೆ ಇಲ್ಲೇ ಭೇಟಿಯಾದ್ರೆ ಬಹುದಿವಸಗಳ ಅಗಲಿಕೆ ಹೇಗಿರುತ್ತೇನ್ನೊದಾದ್ರೂ ತಿಳಿಯುತ್ತೆ.

[ಮಲ್ಲಿಕಾ ವಿಲೋಮನ ಬಳಿಗೆ ನಡೆದು ತೋಳು ಹಿಡಿದು ಕಿಟಕಿಯಿಂದ ಎಳೆಯಲು ಪ್ರಯತ್ನಿಸುತ್ತಾಳೆ]

ಮಲ್ಲಿಕಾ :- ನಿಮ್ಮನ್ನು ಬೇಡ್ಕೊಳ್ತೇನೆ. ದಯವಿಟ್ಟು ಇಲ್ಲಿರ್ಬೇಕೂಂತ ಹಟ ಮಾಡ್ಬೇಡಿ.

[ತೋಳು ಹಿಡಿದು ಎಳೆಯಲು ಬಯಸುತ್ತಾಳೆ. ಆದರೆ ವಿಲೋಮ ಸ್ಥಳವಿಟ್ಟು ಕದಲುವುದಿಲ್ಲ. ದೂರದಲ್ಲಿ ಕುದುರೆ ಗೊರಸಿನ ಸಪ್ಪಳ ಕೇಳಿಸುವುದು]

ಹೇಳಿದ್ದೀನಿ.... ದಯವಿಟ್ಟು ನೀವು ಹೋಗಿ. ಇದು ನನ್ಮನೆ. ಈ ಹೊತ್ತು ನೀವಿಲ್ಲಿರೋದು ನನಗಿಷ್ಟವಿಲ್ಲ.

[ವಿಲೋಮ ಕದಲದೆ ಅದೇ ಸ್ಥಳದಲ್ಲಿ ನಿಂತಿರುವನು. ಗೊರಸಿನ ಸಪ್ಪಳ ಹತ್ತಿರಕ್ಕೆ ಬರುತ್ತಾ ಬರುವುದು. ಅವನನ್ನು ಬಿಟ್ಟು ಮಲ್ಲಿಕಾ ಅಂಬಿಕೆಯ ಬಳಿಗೆ ಬಂದು ಭುಜ ಹಿಡಿದು ಕೊಳ್ಳುವಳು.]

ಅಮ್ಮ ಇವರ್ನ ಇಲ್ಲಿಂದ ಹೋಗೋಕ್ಹೇಳಮ್ಮ. ಈ ಹೊತ್ತು ಆಗಬಾರದ್ದೇನಾದ್ರೂ ಆಗೋದು ನಂಗಿಷ್ಟವಿಲ್ಲ. ನಿನ್ನ ಆರೋಗ್ಯ ಬೇರೆ ಸರಿಯಿಲ್ಲ. ಅದಕ್ಕೆ ಏನಾದ್ರೂ ಆಗೋದು ನಂಗೆಬೇಡ. ನಿನ್ನ ಆರೋಗ್ಯಾನೂ ಇದರಿಂದ ಹದಗೆಟ್ಟೀತು.

[ಅಂಬಿಕೆಯನ್ನು ಅಲುಗಾಡಿಸಿದಾಗ ಆಕೆ ಜಡವಸ್ತುವಿನಂತೆ ಅಲುಗಾಡುವಳು. ಕ್ರೋಧದ ಗೆರೆಗಳು ಮೂಡುವುವು. ಎವೆಯಿಕ್ಕದ ಕಣ್ಣುಗಳಿಂದ ಮುಂದುಗಡೆ ನೋಡುತ್ತಿರುವಳು. ಕುದುರೆ ಗೊರಸಿನ ಶಬ್ದ ಹತ್ತಿರಕ್ಕೆ ಬರಲು ಆಕೆಯನ್ನು ಬಿಟ್ಟು ವಿಲೋಮನ ಬಳಿಗೆ ಬರುವಳು]

ಮಲ್ಲಿಕಾ :- ವಿಲೋಮರೇ, ದಯವಿಟ್ಟು ನೀವಿಲ್ಲಿಂದ ಹೋಗಿ. ನೀವು....

[ಕುದುರೆ ಗೊರಸಿನ ಸಪ್ಪಳ ಹತ್ತಿರವಾದಂತಾಗಿ ಮತ್ತೆ ದೂರಸರಿಯುವುದು. ಮಲ್ಲಿಕಾ ಮೂಕಳಂತಾಗಲು ವಿಲೋಮ ನಿಧಾನವಾಗಿ ಕಿಟಕಿಯಿಂದ ಈ ಕಡೆ ತಿರುಗಿ ನೋಡುವನು.]

ವಿಲೋಮ:- ಹೊಗ್ತೇನೆ. [ವ್ಯಂಗ್ಯವಾಗಿ ನಗುವನು] ನನ್ನಿಂದ ಆಗಬಾರದ್ದು ಏನಾದ್ರೂ ಆಗೋದು ನಂಗೂ ಇಷ್ಟವಿಲ್ಲ. ಆದ್ರೂ..... ಏನಾಗ್ತಿತ್ತೋ ಅನ್ನೋದಾದ್ರೂ ಕೇಳ್ಬಹುದಲ್ಲ?

[ಕಿಟಕಿಯಿಂದ ಸರಿದು ಕೋಣೆಯ ಮಧ್ಯ ಭಾಗಕ್ಕೆ ಬರುವನು]

ಏನಂಬಿಕ; ನಾನಿಲ್ಲದ್ದಿದ್ರೆ ಏನಾಗ್ತಿತ್ತೂನ್ನೋದು ನೀನಾದ್ರೂ ಹೇಳ್ತೀಯಾ?

[ಅಂಬಿಕೆ ತುಟಿ ಕಚ್ಚುವಳು]

ಅಂಬಿಕೆ :- ಗೊತ್ತಿತ್ತು. ಇವತ್ತೇ ಅಲ್ಲ, ಆವತ್ನಿಂದ್ಲೂ ನಂಗೆ ತಿಳಿದಿತ್ತು. ಆವನೇನಾದ್ರೂ ಬಂದಿದ್ರೆ ಆಶ್ಚರ್ಯವೇ ಆಗ್ತಿತ್ತು ಹೊರತು ಬರದಿದ್ದಕ್ಕೆ ಆಶ್ಚರ್ಯವೇನೂ ಇಲ್ಲ.

[ಧ್ವನಿಯೇರುತ್ತದೆ] ಮಲ್ಲಿಕಾ !

[ಶಕ್ತಿಗುಂದುತ್ತಿರುವಂತೆ, ನಿಧಾನವಾಗಿ ಆಸನದ ಮೇಲೆ ಕೂಡುವಳು]

ನನಗೆ ಆಶ್ಚರ್ಯವೇನೂ ಇಲ್ಲ ಅವನ ವಿಷಯಾನ ಸರಿಯಾಗೇ ತಿಳಿದಿದ್ದೀನೀಂತ ನನಗೆ ಸಂತೋಷವೇ! ಬದುಕು ಒಂದು ಭಾವನೆ! ಮೃದು ಭಾವನೆ !! ಬಹಳ.... ಬಹಳ.... ಮೃದುವಾದ, ಕೋಮಲವಾದ ಭಾವನೆ.

[ಉನ್ಮತ್ತ ನಗೆಯ ಕಾರಣದಿಂದ ಕೆಮ್ಮು ಹೆಚ್ಚುವುದು]

ವಿಲೋಮ:- ನನಗಂತೂ ದುಃಖವೇ ಆಯ್ತು. ಎಷ್ಟೋ ವರ್ಷಗಳಿಂದ ನಿರೀಕ್ಷಿಸಿದ ದಿನ್ವಾಗಿತ್ತು. ನಮ್ಮ ಸ್ನೇಹದ ಮೇಲೂ ನನಗೆ ನಂಬಿಕೆಯಿತ್ತು.

[ಸಾಭಿಪ್ರಾಯವಾಗಿ ಮಲ್ಲಿಕಾಳ ಕಡೆ ನೋಡುವನು]

ಆದ್ರೆ ಈಗ ಆ ನಂಬಿಕೆಯಿಲ್ಲ. ಬಹುಶಃ ಈ ಸ್ನೇಹ ಏಕ ಪಕ್ಷೀಯವಾಗಿದ್ದಿರ ಬಹುದು. ನಮ್ಮನ್ನು ಯಾವಾಗ್ಲೂ ತನ್ನ ಸ್ನೇಹಕ್ಕೆ ಯೋಗ್ಯರೂಂತ ಅವ್ನು ತಿಳಿದಿರಲಿಲ್ಲ.... ಅಲ್ಲೆ ಸ್ನೇಹಾನ್ನೋದು ಸಮಾನರೊಂದಿಗೆ ಮಾತ್ರಾ ಸಾಧ್ಯ!

[ಮಲ್ಲಿಕಾ ಕೂಡಲೇ ಎದ್ದು ನಿಲ್ಲುವಳು]

ಮಲ್ಲಿಕಾ :- [ನಿರಾಶೆಯಿಂದುಂಟಾದ ಕಠೋರ ದೃಷ್ಟಿಯಿಂದ]
ವಿಲೋಮರೇ! [ಹುಡುಗಾಟಿಕೆಯ ದೃಷ್ಟಿಯನ್ನು ಅವಳತ್ತ ಬೀರುವನು] ಮತ್ತೊಮ್ಮೆ ಹೇಳ್ತಿದ್ದೇನೆ. ನೀವು ಹೊರಟ್ಹೋಗಿ ಇಲ್ಲವಾದ್ರೆ ಏನಾದ್ರೂ ಅನಾಹುತ ಆಗೇ ಆಗುತ್ತೆ.

ವಿಲೋಮ:- ಹೀಗೋ ! [ಭುಜಹಾರಿಸಿ] ಹಾಗಾದ್ರೆ ನಾನು ಹೋಗ್ಲೇಬೇಕು.... ಒಳ್ಳೇದು... ಅಂಬಿಕಾ, ನಿನ್ನ ಆರೋಗ್ಯದ ಕಡೆ ಗಮನವಿರಲಿ. ನನಗೆ ನಿನ್ನ ಆರೋಗ್ಯದ್ದೇ ಚಿಂತೆಯಾಗಿದೆ. ಆದಷ್ಟೂ ತುಪ್ಪ ಜೇನು ಇವುಗಳನ್ನೇ ಉಪಯೋಗಿಸು. ಈಗ ತಾನೇ ಹೊಸದಾಗಿ ಜೇನನ್ನ ತೆಗೆದಿದ್ದೇನೆ. ಬೇಕಾದ್ರೆ ನಿನ್ಗೆ......

ಮಲ್ಲಿಕಾ :- [ತೀಕ್ಷ್ಣಧ್ವನಿಯಿಂದ] ನಮಗೆ ಜೇನಿನ ಅವಶ್ಯಕತೆಯಿಲ್ಲ. ಮನೇಲೇ ಬೇಕಾದಷ್ಟಿದೆ.

ವಿಲೋಮ:- ಹೌದೇನು.... ಒಳ್ಳೇದು ಅಂಬಿಕಾ.
[ಕ್ಷಣ ಕಾಲ ಏನೋ ಯೋಚಿಸುವವನಂತಿದ್ದು ಭುಜ ಕುಣಿಸಿ ಹೊರಡುತ್ತಾ ಮತ್ತೆ ತಿರುಗಿ ನೋಡುವನು]
ಜೇನಿನ ಅವಶ್ಯಕತೆ ಏನಾದ್ರೂ ಬಿದ್ರೆ ಸಂಕೋಚ ಪಟ್ಕೋಬೇಡ!
[ತುಟಿ ಬಿಗಿ ಹಿಡಿದು ಇಬ್ಬರನ್ನೂ ನೋಡುತ್ತಾ ಹೊರಟು ಹೋಗುವನು. ಮಲ್ಲಿಕಾ ತಲೆ ಬಗ್ಗಿಸಿ. ಭಾರದಿಂದ ತುಳಿಯಲ್ಪಟ್ಟವಳಂತೆ ಎದ್ದು ನಿಂತು ಸೀರೆಯನ್ನು ಕೊಡವಿ ಸರಿಪಡಿಸಿಕೊಂಡು ಹೋಗುವಳು. ಅಂಬಿಕೆಯ ಮುಖದಲ್ಲಿ ಮೂಡಿದ್ದ ಆವೇಶ, ನಿರಾಶೆಗಳು ಅಸಹಾಯಕತೆಯ ಭಾವನೆಗೆ ತಿರುಗುವುವು. ಮಲ್ಲಿಕಾಳ ಮೇಲೆ ದೃಷ್ಟಿಯಿಡುವಳು]

ಅಂಬಿಕಾ :- ಮಲ್ಲಿಕಾ!

ಮಲ್ಲಿಕಾ :- ಅಮ್ಮಾ!
[ಅಂಬಿಕಾ ನಿಧಾನವಾಗಿ ಎದ್ದು ಬಂದು ಅವಳನ್ನಪ್ಪಿಕೊಳ್ಳುವಳು. ತಾಯಮಡಿಲಲ್ಲಿ ಮುಖ ಮರೆಸಿಕೊಂಡು ಅಳಲು ಪ್ರಯತ್ನಿಸುವಳು. ದೇಹದಲ್ಲುಂಟಾದ ನಡುಕದಿಂದ ಧ್ವನಿ ಹೊರಡುವುದು ಕಷ್ಟವಾಗುವುದು. ಅಂಬಿಕಾ ನಿಧಾನವಾಗಿ ಕಣ್ಣು ಮುಚ್ಚಿಕೊಂಡು ಮಲ್ಲಿಕಾಳ ಕಂಪಿಸುತ್ತಿರುವ ದೇಹವನ್ನು ಪ್ರೀತಿಯಿಂದ ನೇವರಿಸುವಳು. ತುಟಿ ಕೆನ್ನೆಗಳನ್ನು ಅವಳ ತಲೆಗದುಮಿಟ್ಟು ಮುದ್ದಾಡುವಳು]

ಅಂಬಿಕೆ :- ಅಪ್ನಿಗಾಗಿ ಇನ್ನೂ ಅಳ್ತೀಯಾ? ಆ ವ್ಯಕ್ತಿಗಾಗಿ ಯಾರು....

ಮಲ್ಲಿಕಾ :- ಅವರ ವಿಷಯವಾಗಿ ಹೇಳ್ಬೇಡಮ್ಮಾ, ಏನೂ ಹೇಳ್ಬೇಡ.... [ಬಿಕ್ಕಿ ಬಿಕ್ಕಿ ಅಳುವಳು]

* * *

# ಮೂರನೆ ಅಂಕ

**ಕೆಲವರ್ಷಗಳ ನಂತರ**

[ಪರದೆಯೇಳುವ ಮೊದಲು, ಗುಡುಗು, ಮಳೆ, ಶಬ್ದ ಪರದೆಯೆದ್ದ ಮೇಲೆ ಅದೇ ಕೋಣೆ. ಮಿಣಕು ಮಿಣುಕೆನ್ನುತ್ತ ಸಣ್ಣ ದೀಪವೊಂದುರಿಯುತ್ತಿದೆ. ಮೊದಲಿದ್ದುದಕ್ಕಿಂತ ಕೋಣೆಯಲ್ಲಿ ಸ್ವಲ್ಪ ವ್ಯತ್ಯಾಸ ಕಂಡು ಬರುವುದು. ವಸ್ತುಗಳೆಲ್ಲಾ ಅಸ್ತವ್ಯಸ್ತವಾಗಿ ಹರಡಿಕೊಂಡಿವೆ. ಮುರಿದು ಬಿದ್ದಿರುವ ಒಂದೇ ಒಂದು ಕೊಡ. ಪೀಠ [ಆಸನ] ಮೊದಲಿನ ಸ್ಥಳದಿಂದ ಬೇರೆಯಾಗಿದೆ. ಅದರ ಮೇಲೀಗ ಹುಲಿ ಚರ್ಮವಿಲ್ಲ. ಗೋಡೆಯ ಮೇಲಿದ್ದ ಸ್ವಸ್ತಿಕ ಮುಂತಾದ ಚಿತ್ರಗಳೆಲ್ಲಾ ಸ್ವಲ್ಪ ಮಸಕಾಗಿವೆ. ಒಲೆಯಬಳಿ ಕೇವಲ ಕೆಲವು ಪಾತ್ರೆಗಳು ಮಸಿಯಿಂದ ಕೂಡಿಬಿದ್ದಿವೆ. ಒಂದು ಮೂಲೆಯಲ್ಲಿ ಕೊಳಕು ಚಿಂದಿ ಬಟ್ಟೆಗಳ ರಾಶಿ, ಕೊಠಡಿಯಲ್ಲಿ ನಿಸ್ತಬ್ಧತೆ.

ತೊಯ್ದ ಬಟ್ಟೆಗಳಿಂದ ಮಾತುಲನ ಪ್ರವೇಶ. ಸುತ್ತಲೂ ಒಮ್ಮೆ ನೋಡಿ ಯಾರೂ ಇಲ್ಲದಿರುವುದನ್ನು ಕಂಡು ಇಲ್ಲವೆಂಬಂತೆ ತಲೆತೂಗಿ ಕೊಠಡಿಯ ಮಧ್ಯಕ್ಕೆ ಬರುವನು]

**ಮಾತುಲ :-** ಮಲ್ಲಿಕಾ !

**ಮಲ್ಲಿಕಾ :-** [ಒಳಗಿನಿಂದ] ಯಾರದು?

**ಮಾತುಲ :-** ನಾನು ಮಾತುಲ. ನೋಡು ಮಳೆಯಿಂದ ಮಾತುಲನ ಗತಿ ಏನಾಗಿದೇಂತ?

[ತಲೆಯಿಂದ ನೀರು ತೊಟ್ಟಿಡುತ್ತಿದೆ. ತೊಯ್ದ ಬಟ್ಟೆಗಳನ್ನು ಹಿಂಡುವನು. ಮಲ್ಲಿಕಾ ಒಳಗಿನಿಂದ ಬರುವಳು. ಬಟ್ಟೆಯೆಲ್ಲಾ ಹರಿದಿದೆ. ಮೊದಲಿಗಿಂತ ಸ್ವಲ್ಪ ಕಪ್ಪಾಗಿದ್ದಾಳೆ. ಕಣ್ಣಲ್ಲಿ ವಿಚಿತ್ರ ಭಾವನೆ ಕೊಠಡಿಯ ಜೀರ್ಣ ಸ್ಥಿತಿಯೇ ಅವಳಲ್ಲಿ ಮೈತಾಳಿದಂತಿದೆ. ಒಳಗಿನ ಬಾಗಿಲ ಮರೆಯಿಂದ ಕಾಣುತ್ತಿದ್ದ ಹಾಸಿಗೆಗೆ ಬದಲಾಗಿ ಒಂದು ಮುರಿದ ತೊಟ್ಟಿಲಿದೆ. ಹೊರಗೆ ಬಂದು ಒಳಗಿನ ಬಾಗಿಲನ್ನು ಮುಚ್ಚುವಳು]

ಮಲ್ಲಿಕಾ :- ಆರ್ಯ ಮಾತುಲರೇ? ತಾವು ಈ ವೇಳೇಲಿ?

ಮಾತುಲ :- ಮಳೆಯಿಂದ ತಪ್ಪಿಸ್ಕೊಳ್ಳೇಕೆ ಈ ಮನೆಯಲ್ದೆ ಬೇರೆ ಸ್ಥಳಾನೇ ಇಲ್ಲ. ಎಷ್ಟಾದ್ರೂ, ನೀನು ಅದೇ ಮಲ್ಲಿಕಾ ಅಲ್ವೇಂತ ಯೋಚ್ನೆ ಮಾಡ್ದೆ! ಆಷಾಢದ ಈ ಮಳೇನೇ ನನ್ನ ಕೊನೇಂತನ್ಸುತ್ತೆ! ಮೊದ್ಲು ಗಟ್ಟುಮುಟ್ಟಾಗಿ ಎರಡು ಕಾಲೂರಿ ಎಂಥಾ ಮಳೇಲಾದ್ರೂ ನಡೀತಿದ್ದೆ. ಎಷ್ಟು ಮಳೆ ಬಂದ್ರೂ ಯೋಚ್ನೆ ಇರ್ಲಿಲ್ಲ. ಆದ್ರೆ ಈಗಂತು, ಕೋಲು ಮುಂದಿಟ್ರೆ ಕಾಲು ಹಿಂದ್ಜಾರುತ್ತೆ. ಕಾಲು ಮುಂದಿಟ್ರೆ ಕೋಲು ಹಿಂದ್ಹೋಗುತ್ತೆ. ಅರಮನೇಲಿದ್ದು ಕಾಲು ಕಳ್ಕೋತೇನೆಂತ ಗೊತ್ತಿದ್ರೆ, ಅಲ್ಲಿಗೆ ಹೋಗ್ತಾಲೇ ಇರಲಿಲ್ಲ. ಜೊತೇಗೇ ಇವರೆಲ್ಲಾ ನನ್ನ ಕಾಲನ್ನೂರೋಕ್ಹಾಗ್ದಿರೋ ಹಾಗೆ ನನ್ನ ಮನೇನ ಮಾಡಿಟ್ಟಿದ್ದಾರೆ. ಈಗ್ಹಾಕಿರೋ ನುಣುಪು ಕಲ್ಲಿಗಿಂತ ಕಾಲನ್ನ ಚೆನ್ನಾಗಿ ಊರ್ಬಹುದಾಗಿತ್ತು. ಹಿಂದಿದ್ದ ಮನೆ ಒಳ್ಳೆದಾಗಿತ್ತು. ನಾನೀಗ ಮನೆ ಇಲ್ದವ್ನಂಗೆ ಆಗಿದ್ದೀನಿ. ಒಳಗೂ ಇರೋಕಾಗ್ತಿಲ್ಲ, ಹೊರಗು ಇರೋಕಾಗ್ತಿಲ್ಲ. ಇಲ್ಲಿನ ಬಿಳಿ ನುಣುಪು ಕಲ್ಲುಗಳನ್ನ ನೋಡಿದ್ರೇನೇ ನಾನು ಕಾಲ್ಮುರ್ಕೊಂಡ ಆ ಅರಮನೆ ನೆನಪಿಗೆ ಬರುತ್ತೆ.

ಮಲ್ಲಿಕಾ :- ಎಷ್ಟೊ ಹೊತ್ತಿನಿಂದ ನಿಂತಿದ್ದೀರಿ. ಈ ಆಸನದ ಮೇಲೆ ಕೂತ್ಕೊಳ್ಳಿ.

[ಮಾತುಲ ಹೋಗಿ ಊರುಗೋಲನ್ನು ಪಕ್ಕದಲಿಟ್ಟು ಭದ್ರವಾಗಿ ಕೂಡುವನು]

ಮಾತುಲ :- ನನ್ನ್ಯಾರಾದ್ರೂ ಕೇಳಿದ್ರೆ, ಅರಮನೇಲಿರೋಕಿಂತ ಹೆಚ್ಚಿನ ಕಷ್ಟ ಬೇರಿಲ್ಲಾಂತ ಹೇಳ್ತೀನಿ. ಮುಂದೆ ಹೋದ್ರೆ ಕಾವಲುಗಾರರು, ಹಿಂದೆ ನೋಡಿದ್ರೆ ಕಾವಲ್ಗಾರ್ರು! ನಿಜವಾಗಿ ಹೇಳೋದಾದ್ರೆ, ನನ್ನ ಹಿಂದೆ ಕಾವಲುಗಾರ್ರೋ, ಅಥವಾ ನಾನೇ ಅವರ ಹಿಂದೇನೋ, ತಿಳೀತಿರ್ಲಿಲ್ಲ. ಮಲ್ಲಿಕಾ! ಇದಕ್ಕಿಂತ ಹೆಚ್ಚಿನ ಕಷ್ಟಾಂದ್ರೆ, ಯಾರಿಗೆ ನಾನು ತಲೆಬಗ್ಗಿಸಿ ಗೌರವಿಸ್ಬೇಕೊಂತಿದ್ನೊ ಅವ್ರೇ ನನ್ಮುಂದೆ ತಲೆ ಬಗ್ಗಿಸ್ತಿದ್ರು.... ನನ್ಮುಂದೆ....

[ತನ್ನ ಕಡೆ ಸನ್ನೆ ಮಾಡಿ ತೋರಿಸುವನು]

ನೀನೇ ಹೇಳು, ಮಾತುಲನಲ್ಲಿ ಅಂಥಾದ್ದೇನಿದೆ, ತಲೆ ಬಗ್ಸೋಕೆ? ದೇವತೆಯಲ್ಲ, ದೇವ್ರಲ್ಲ ಪಂಡಿತ್ನಲ್ಲ, ರಾಜನೂ ಅಲ್ವೇಅಲ್ಲ. ಆದ್ರೂ ಯಾರ್ಯಾಕೆ ನನ್ಗೆ ಬಗ್ಗಬೇಕು. ಮಾತುಲನಿಗೇ ಅಲ್ಲ, ಮಾತುಲ ಬಿಚ್ಚಿಟ್ಟ ಬಟ್ಟೆಗಳ್ಗೂ ಬಗ್ಗೋಕೆ ತಯಾರಿದ್ರು. ಒಮ್ಮೆ ನನ್ನ ಶರೀರಾನ ಚಿವುಟ್ಕೊಂಡು

ನೊಡ್ಬೇಕಾಗಿತ್ತು.... ನನ್ನ ಶರೀರ ರಕ್ತ ಮಾಂಸಗಳಿಂದಾದ್ದೋ. ಇಲ್ಲ, ಗುಡಿಗಳಲ್ಲಿರೋ ದೇವರ ವಿಗ್ರಹಗಳ ಹಾಗೆ ಕಲ್ಲು ಮಣ್ಣುಗಳಿಂದಾದದ್ದೋಂತ"- ಇಲ್ಲಿ ಬಂದದ್ದಕ್ಕೆ ಒಂದ್ಸಂತೋಷಾಂದ್ರೆ, ಬಗ್ಗಿ ನಮಸ್ಕಾರ ಮಾಡೋಕೆ ಯಾರೂ ಇಲ್ಲ, ಅಲ್ದೆ ನಾನು ಮುಂದೆ ನಡೀತಿದ್ದೀನೋ, ಇಲ್ಲ,. ಅವ್ರು ಮುಂದೆ ನಡೀತಿದ್ದಾರೋ ಅನ್ನೋ ಭ್ರಾಂತೀನೂ ಉಂಟಾಗ್ತಿಲ್ಲ. ಆದ್ರೆ ಇಲ್ಲಿನ ಮಳೆ ಮಾತ್ರ ನನಗೆ ಸಹಿಸೋಕಾಗ್ತಿಲ್ಲ.

ಮಲ್ಲಿಕಾ :- ಬಟ್ಟೆ ಒಣಗಿಸ್ಕೊಳ್ಳೋಕೆ ಬೆಂಕಿ ಮಾಡ್ಲೆ?

[ಒಲೆಯ ಕಡೆ ಒಮ್ಮೆ ನೋಡಿ ಸುತ್ತಲೂ ದೃಷ್ಟಿ ಹರಿಸುವನು]

ಮಾತುಲ :- ಈ ಮನೆ ಅವಸ್ಥೆಯೇನು ಹೀಗ್ಮಾಡಿದ್ದಿ?

[ಸರಿಯಲ್ಲ ಅನ್ನೋ ಹಾಗೆ ತಲೆಯಾಡಿಸಿ]

ಅಂಬಿಕಾ ಇಲ್ದೆ ಮನೆಯಲ್ಲಿ ಒಂದು ವ್ಯವಸ್ಥೆಯಿಲ್ಲ. ಎಲ್ಲಿ ನೋಡಿದ್ರೂ ಅರಾಜಕತೇನೇ ಇರೋಹಾಗಿದೆ. ಅಲ್ಲಾ ಪ್ರಿಯಂಗು ಮಂಜರಿ ನಿನಗೆ ಕಳಿಸಿದ್ದ ನಾಣ್ಯಗಳ್ನ, ಬಟ್ಟೆಗಳನ್ನ ಹಿಂತಿರುಗಿಸಿದ್ದು, ಸರೀಂತ ಕಾಣುತ್ತೇನು ನಿಂಗೆ?

ಮಲ್ಲಿಕಾ :- ನಂಗೆ ಅವುಗಳು ಬೇಕಿರ್ಲಿಲ್ಲ.

[ಕೊಳಕು ಬಟ್ಟೆಗಳ ರಾಶಿಯಡಿಯಿಂದ ಭೋಜ ಪತ್ರಗಳ ಗ್ರಂಥವನ್ನು ತೆಗೆದು ಧೂಳು ಕೊಡವುತ್ತಾಳೆ]

ಮಾತುಲ :- ನಿನ್ನ ಮನೇನ ಹೊಸ್ದಾಗಿ ಕಟ್ಟೋಕೆ ಶಿಲ್ಪಿಗಳಿಗೆ ಹೇಳಿದ್ಲೇನು?

ಮಲ್ಲಿಕಾ :- ಅದರ ಉದ್ಧಾರ ಆಗ್ಬೇಕಿದೇಂತ ನನಗನ್ನಿಸ್ಲಿಲ್ಲ

[ಗ್ರಂಥವನ್ನು ಇಡಲು ಆ ಕಡೆ ಈ ಕಡೆ ಸ್ಥಳವನ್ನು ಹುಡುಕುವಳು. ಮಾತುಲನ ಬಳಿ ಪೀಠದ ಮೇಲಿಡುವಳು]

ತಮಗಾಗಿ ಬೆಂಕಿ ಮಾಡ್ಲೇನು?

ಮಾತುಲ :- ಬೇಡ ಮಳೆ ನಿಂತಿದೆ.

[ಊರುಗೋಲಿಗೋಸ್ಕರ ಎದ್ದು ಕಿಟಕಿಯ ಸಮೀಪಕ್ಕೆ ಹೋಗುವನು]

ತುಂಬಾ ಸಣ್ಣಗೆ ಹನೀತಿದೆ. ಹೇಗೊ ಹಾಗೆ ಎಳ್ಕೊಂಡು ಮನೇ ತಂಕ

ಹೋಗ್ತೀನಿ. ಹೋದ್ಮೇಲೆ ಅಲ್ಲಿ ಬಟ್ಟೆ ಒಣ್ಗೆ ಹಾಕ್ಕೋತೇನೆ. ಇಲ್ಲಾಂದ್ರೆ ಮಳೆ ಇನ್ನೂ ಜೋರಾದೀತು!

[ಕಿಟಕಿ ಬಿಟ್ಟು ಅವಳ ಹತ್ತಿರ ಬರುವನು]

ಕಾಶ್ಮೀರದ ವಿಷಯವೇನಾದ್ರೂ ಕೇಳಿದೆಯೇನು?

[ಮಲ್ಲಿಕಾ ಸ್ಥಿರ ಗಂಭೀರ ದೃಷ್ಟಿಯಿಂದ ಅವನ್ನ ನೋಡುವಳು]

ಮಲ್ಲಿಕಾ :- ನಾನು ಮನೇಲಿ ಬಿದ್ದಿರ್ತೀನಿ. ನನಗೆ ಹೇಗೆ ಸಮಾಚಾರ ಗೊತ್ತಾಗುತ್ತೆ?

ಮಾತುಲ :- ನಾನು ಕೇಳೇನೋ ಇದ್ದೀನಿ. ಆದ್ರೆ ನನಗೆ ನಂಬಿಕೆ ಬರ್ತಿಲ್ಲ. ಆದ್ರೂ ಆಗಿದೆ. ರಾಜನೀತಿಯಲ್ಲಂತೂ ಯಾವ್ದೂ ಅಸಾಧ್ಯವಲ್ಲ. ಆಗ್ದಿರೋ ಸಾಧ್ಯತೆ ಎಷ್ಟಿದೆಯೋ, ಅಷ್ಟೇ ಆಗೋ ಸಾಧ್ಯತೇನೂ ಇದೆ. ಆಗೋ ಸಂಭವ ಇದ್ರೂ ಅದು ಆಗ್ದಿರೋ ಸಂಭವಾನೂ ಉಂಟು.

[ಸ್ತಂಭಿತಳಂತೆ ಮಲ್ಲಿಕಾ ನೋಡುತ್ತಿರುವಳು]

ಮಲ್ಲಿಕಾ :- ವಿಷಯವಾದ್ರೂ ಏನು?

ಮಾತುಲ :- ವಿಷಯ ಇಷ್ಟೆ, ಸಾಮ್ರಾಟರ ಸಾವಿನಿಂದ ಕಾಶ್ಮೀರದಲ್ಲಿ ಶತ್ರುಗಳನ್ನೆಲ್ಲಾ ಕಲೆ ಹಾಕ್ತಿದ್ದಾರಂತೆ. ಅಲ್ಲಿಂದ ಘಾಯಗೊಂಡು ಬಂದಿದ್ದ ಸೈನಿಕನಂತೂ, ಕಾಳಿದಾಸ ಕಾಶ್ಮೀರ ಬಿಟ್ಟು ಹೊರಟು ಹೋಗಿದ್ದಾರೇಂತ ಹೇಳ್ದ!

ಮಲ್ಲಿಕಾ :- ಅವ್ರು ಕಾಶ್ಮೀರ ಬಿಟ್ಟಿದ್ದಾರಾ!

[ಅಷ್ಟೇ ಆಶ್ಚರ್ಯದಿಂದ, ಯೋಚಿಸ್ತಾ ಆಸನದ ಮೇಲೆ ಕೂಡುವಳು]

ಈಗ ಹಾಗಾದ್ರೆ ಉಜ್ಜಯಿನಿಗೇ ಮತ್ತೆ ಹೋಗಿದ್ದಾರೆಯೇ?

ಮಾತುಲ :- ಇಲ್ಲ, ಅಲ್ಲಿನ ಜನಾಂತು, ಅವ್ರು ಸನ್ಯಾಸ ತೊಗೊಂಡಿರ್ಬೇಕೂಂತ್ಲೇ ನಂಬಿದ್ದಾರೆ. ರಾಜಧಾನಿಯಲ್ಲಿ ಅವ್ನಿಗೆ ಎಷ್ಟರ ಮಟ್ಟಿಗೆ ಗೌರವ ಇಂದೇಂದ್ರೆ, ಕಾಶ್ಮೀರದಲ್ಲಿ ಇರೋಕಾಗ್ದಿದ್ರೆ ಕೂಡ್ಲೆ ರಾಜಧಾನಿಗೆ ಹಿಂತಿರುಗ ಬಹುದಾಗಿತ್ತು. ಆದ್ರೂ ಸಾಧ್ಯವಿಲ್ದೆ ಏನಿಲ್ಲ. ಒಂದು ಕಡೆ ರಾಜ ನೀತಿಯಾದ್ರೆ ಮತ್ತೊಂದ್ಕಡೆ ಕಾಳಿದಾಸ! ಇವತ್ತಿನ ವರ್ಗೆ ಇವೆರಡರ ಗುರಿ ಏನೂಂತ್ಲೆ ಗೊತ್ತಾಗಿಲ್ಲ. ನಾನು ಯೋಚಿಸೋದ್ರ ನಿಜಾಂಶ ಯಾವಾಗ್ಲೂ ವಿರುದ್ಧವಾಗೇ ಇರುತ್ತೆ. ಆದ್ರೆ ಆ ವಿರೋಧ ಮತ್ತು ವಿಪರೀತಾನ ಸರಿಯಾಗಿ ತಿಳ್ಕೊಳ್ಳೋಕೆ ಪ್ರಯತ್ನಿಸಿದ್ರೆ ಸತ್ಯ ವಿಪರೀತಕ್ಕಿಂತ್ಲೂ ವಿಪರೀತವಾಗಿರೋದು ತಿಳಿಯುತ್ತೆ. ಅದಕ್ಕೇ ನಾನು ಏನು ಯೋಚಿಸ್ತೇನೋ ಅದು ಯಾವಾಗ್ಲೂ ಸುಳ್ಳಾಗಿರುತ್ತೆ.

ಇದರಿಂದ ನೀನೇ ನಿರ್ಧಾರ ಮಾಡು, ಅವನು ಸಂನ್ಯಾಸ ತೊಗೊಂಡಿದ್ದಾನೋ ಅಥಾವ ಇಲ್ವೋ ಅನ್ನೋದ್ನ". ನಾನು ಯೋಚಿಸೋ ಹಾಗೆ ಅವ್ನು ಸಂನ್ಯಾಸ ತೊಗೊಂಡಿಲ್ಲ- ಅಂದ್ರೆ ಸಂನ್ಯಾಸ ತಗೊಂಡು ಅವ್ನು ಕಾಶೀಗೆ ಹೊರಟು ಹೋಗಿದ್ದಾನೇನ್ನೋದು". ಇದ್ರ ನಿಜಾಂಶವಾಗಿರ್ಬೇಕು?

[ಮಲ್ಲಿಕಾ ಆಸನದಿಂದೆದ್ದು ಗ್ರಂಥವನ್ನಪ್ಪಿಕೊಳ್ಳುವಳು]

ಮಲ್ಲಿಕಾ :- ಇಲ್ಲಾ-ಇಲ್ಲ..... ಇದು ನಿಜಾಲ್ಲ, ನನ್ನ ಮನಸ್ಸು ಇದನ್ನೊಪ್ಪಿಲ್ಲ.

[ಕೋಲನ್ನು ಕುಟ್ಟಿ]

ಮಾತುಲ :- ನಾನು ನಿನಗೆ ಏನ್ಹೇಳಿದ್ದೆ? ನಾನು ಹೇಳೋದು ಯಾವಾಗ್ಲೂ ನಿಜ ಆಗೊಲ್ಲ, ಅದಕ್ಕೇ ನಾನು ಏನೂ ಹೇಳೊಲ್ಲ. ಅವನು ಕಾಶಿಗೆ ಹೋಗಿದ್ರೂ ನನ್ಮಾತು, ಸುಳ್ಳು, ಹೋಗ್ದೇ ಇದ್ರೂ ಸುಳ್ಳು....ಇದು ಸರಿಯಲ್ಲ?

[ಕೋಲು ಕುಟ್ಟುತ್ತಾ ಹೋಗುವನು. ಮೂಕಳಂತೆ ಆಸನದ ಮೇಲೆ ಕುಳಿತು ಪುನಃ ಗ್ರಂಥದ ಕಡೆ ನೋಡುವಳು]

ಮಲ್ಲಿಕಾ :- ಇಲ್ಲ ನೀನ್ಹೊಗಿಲ್ಲ, ಸಂನ್ಯಾಸವನ್ನು ತೆಗೆದ್ಕೊಂಡಿಲ್ಲ. ಇದಕ್ಕೋಸ್ಕರ ನಿನ್ನನ್ನಿಲ್ಲಿಂದ ಹೋಗೂಂತ ಹೇಳ್ಲಿಲ್ಲ. ಅಲ್ಲಿ ಹೋಗಿ ಆಡಳಿತ ನಡೆಸೂಂತ್ಲೂ ನಿನ್ನ ಕಳಿಸ್ಲಿಲ್ಲ. ಆದ್ರೂ ಅಲ್ಲಿ ಹೋಗಿ ಅಧಿಕಾರ ವಹಿಸ್ಕೊಂಡಿದ್ದಕ್ಕೆ ನಿನಗೆ ಒಳ್ಳೇದಾಗ್ಲೀಂತ ಬೇಡ್ಕೊಂಡೆ. ನೀನು ನನ್ನ ಶುಭಾಶಯಗಳನ್ನು ಪ್ರತ್ಯಕ್ಷವಾಗಿ ಸ್ವೀಕರಿಸದೇ ಹೋಗಿರ್ಬಹುದು.

[ಗ್ರಂಥವನ್ನು ಆಸನದ ಮೇಲಿಟ್ಟು ಉದ್ವಿಗ್ನಳಾಗಿ ಅದರತ್ತ ನೋಡುವಳು]

ನೀನು ಬದುಕಿನಿಂದ ದೂರ ತಟಸ್ಥನಾಗಿರಬಲ್ಲೆ. ಆದರೆ ನನಗದು ಸಾಧ್ಯವಿಲ್ಲ. ನನ್ನ ರೀತಿಯಲ್ಲೇಕೆ ನೀನು ಬದುಕನ್ನು ನೋಡಲಾರೆ?

[ಗ್ರಂಥವನ್ನಾಸನದ ಮೇಲಿಟ್ಟು ಕೈಗಳೆರಡನ್ನೂ ಹಿಂದಕ್ಕೆ ಕಟ್ಟಿಕೊಂಡು, ಕಿಟಕಿಗೆ ಒರಗಿಕೊಂಡು ನಿಲ್ಲುವಳು]

ವರ್ಷಗಳ ಈ ನನ್ನ ಬದುಕು ಹೇಗಿತ್ತೆನ್ನುವುದು ಗೊತ್ತಿದೆಯೇನು? ನೀನೇ ನೋಡ್ದೆ? ಏನಾಗ್ಬೇಕಾದವಳು ಏನಾಗಿದ್ದೀನಿ?

[ವೇಗವಾಗಿ ಹೋಗಿ ಒಳಗಿನ ಬಾಗಿಲನ್ನು ತೆರೆದು ತೊಟ್ಟಿಲ ಕಡೆಗೆ ಸನ್ನೆ ಮಾಡುವಳು]

ಈ ಜೀವಾನ ನೋಡಿದ್ದೀಯೇನು? ಗುರುತು ಹಿಡಿಯಬಲ್ಲೆಯೇನು? ಇವಳು ಮಲ್ಲಿಕಾ, ಕ್ರಮೇಣವಾಗಿ ಬೆಳೆದು ದೊಡ್ಡವಳಾಗುತ್ತಿದ್ದಾಳೆ. ನಾನು ತಾಯಿಯ ಸ್ಥಾನದಲ್ಲಿ ನಿಂತು, ಇಂದು ಇದರ ಪಾಲನೆ ಪೋಷಣೆಯನ್ನು

ಮಾಡ್ತಿದ್ದೇನೆ.... ಇದು ನನ್ನ ಕೊರತೆಯ ಕುಡಿ! ನೀನು ನನಗೆ ಯಾವ ಸ್ಥಾನದಲ್ಲಿದ್ದೆಯೋ, ಆಸ್ಥಾನವನ್ನು ಬೇರಾರೂ ತುಂಬಲಾರರು. ಆ ಕೊರತೆಯ ಕೂಪದಲ್ಲಿ ಇನ್ನೂ ಏನೇನು ಆಕೃತಿಗಳಿವೆಯೋ? ತಿಳೀತಿಲ್ಲ. ನಿನಗೆ ಗೊತ್ತೇನು, ನನಗಿರೋ ಹೆಸರು ಹೋಗಿ ಏನು ವಿಶೇಷಣ ಕೊಟ್ಟಿದ್ದಾರೇಂತ? ನನಗೀಗ ಹೆಸರಿಲ್ಲ. ಜನರು ಕೊಟ್ಟಿರುವ ವಿಶೇಷಣ ಮಾತ್ರಾ ಉಳ್ಕೊಂಡಿದೆ.

[ಬಾಗಿಲು ಮುಚ್ಚಿ ಆಸನದ ಬಳಿ ಬರುವಳು]

ಇಲ್ಲಿ ಹೋಗಿ ಬರುವ ವ್ಯಾಪಾರಿಗಳು, ನೀನು ಹೆಚ್ಚು ವೇಳೇನೆಲ್ಲಾ ಬೆಲೆವೆಣ್ಣುಗಳ ಜೊತೆ ಕಳೀತೀಂತ ಹೇಳ್ತಿದ್ರು. ಆದರೆ, ಬೆಲೆವೆಣ್ಣುಗಳ ಈ ವೇಷ ನೋಡಿದ್ಯೇನು? ನಾನು ಇವತ್ತೂ ಅದೇ ರೀತಿ ಪರ್ವತ ಶಿಖರಗಳಲ್ಲಿ ಅಲೆದಾಡ್ತೇನೆ. ಮುಗಿಲ-ಹಿಂಡನ್ನು ನೋಡಿ ನಲೀತೇನೆ. ಅದೇ ರೀತಿ 'ಋತು ಸಂಹಾರ' 'ಮೇಘದೂತ' ಕಾವ್ಯದ ಸಾಲುಗಳ್ನ ಓದ್ತೇನೆ. ನನ್ನ ಭಾವ ಭೂಮಿ ಶೂನ್ಯವಾಗೋಕೆ ಬಿಟ್ಟಿಲ್ಲ. ಆದರೆ ನನಗಾದ ಕೊರತೆಯ ನೋವನ್ನು ನೀನು ಊಹಿಸಬಲ್ಲೆಯಾ?

[ಮೊಣಕಾಲೂರಿ ಆಸನದ ಮೇಲೆ ಕೂಡುವಳಲ್ಲದೆ ಗ್ರಂಥವನ್ನು ಕೈಗೆತ್ತಿಕೊಳ್ಳುವಳು]

ಇಲ್ಲಾ ನೀನಂತೂ ಊಹಿಸಲಾರೆ. ನೀನು ಬರೆದಿದ್ದೆ, ಅನೇಕ ಗುಣಗಳ ಮಧ್ಯೆ ಒಂದು ದುರ್ಗುಣ, ಚಂದ್ರನ ಕಿರಣಗಳ ನಡುವೆ ಅದೊಂದು ಕಳಂಕ" ಮುಚ್ಚಿ ಮರೆಯಾಗುವ ಹಾಗೆ, ಮುಚ್ಚುತ್ತೇಂತ. ಆದ್ರೆ ಬಡತನ ಮಾತ್ರ ಮರೆಯಾಗೋಕೆ ಸಾಧ್ಯವೇ ಇಲ್ಲ. ನೂರಾರು ಗುಣಗಳಿದ್ರೂ ಮುಚ್ಕೊಲ್ಲ. ಬದಲಾಗಿ ಒಂದೊಂದೇ ಗುಣಾನ ಕಬಳಿಸ್ತಾ ಬರುತ್ತೆ. ಎಲ್ಲವನ್ನೂ ನುಂಗಿ ನಾಶಮಾಡುತ್ತೆ.

[ತುಟಿ ಕಡಿಯುತ್ತಾ ಮೈ ಮರೆಯುವಳು]

ಆದ್ರೆ ನಾನೆಲ್ಲವನ್ನೂ ಸಹಿಸಿದೆ, ನಾನು ಹಾಳಾಗುತ್ತಿದ್ದೂ, ನಿನ್ನ ಉನ್ನತಿಯಾಗುತ್ತಿದ್ದುದರಿಂದಲೇ ಇಷ್ಟೆಲ್ಲಾ ಸಹಿಸಿದೆ. ನನ್ನಲ್ಲಿ ನನ್ನನ್ನು ಕಾಣದೆ, ನಿನ್ನಲ್ಲಿ ಕಾಣ್ತಿದ್ದೆ. ಇಷ್ಟಾದರೂ ಇವತ್ತೇನ್ಕೇಳ್ತಿದ್ದೀನಿ..... ಎಲ್ಲಾ ಬಿಟ್ಟು ಸಂನ್ಯಾಸ ತೆಗೆಂದ್ಕೊಂಡಿದ್ದೀಂತ್ಲೆ? ಬದುಕಿನಿಂದ ತಟಸ್ಥನಾಗಿ ನಿಲ್ತಿದ್ದೀಂತ್ಲೆ? ನಾನು ಬದುಕಿದ್ದೀನಿ ಅನ್ನೋದ್ರ ಅರಿವಿನಿಂದ್ಲೇ ನನ್ನನ್ನ ವಂಚಿಸ್ತಿರುವೆಯಾ?

[ಮಿಂಚು ಗುಡುಗಿನ ಶಬ್ಧ ಕೇಳುವುದು]

ಅದೇ ಆಷಾಢ, ಅದೇ ರೀತಿಯ ಗುಡುಗು, ಅದೇ ವೇಳೆ, ನಾನೂ ಅವಳೇ. ಅದೇ ಮನೆ.... ಆದ್ರೂ.....

[ಮತ್ತೇ ಮಿಂಚು, ಗುಡುಗಿನ ಶಬ್ಧ, ವರಾಂಡದ ಬಾಗಿಲು ನಿಧಾನವಾಗಿ ತೆರೆದು ಕೊಳ್ಳುವುದು. ಕಾಳಿದಾಸ ರಾಜೋಚಿತ ಉಡುಪಿನಲ್ಲಿದ್ದರೂ ಪೆಟ್ಟುತಿಂದವನಂತೆ, ನೋವುಂಡವನಂತೆ ಬಾಗಿಲು ತೆರೆದು ಹೊಸ್ತಿಲಲ್ಲಿಯೇ ನಿಲ್ಲುವನು. ಮಲ್ಲಿಕಾ ಬಾಗಿಲ ತೆರೆದ ಶಬ್ಧ ಕೇಳಿ ಕೌತುಕದಿಂದ ಆ ಕಡೆ ನೋಡಿ ಎದ್ದು ನಿಲ್ಲುವಳು. ಕಾಳಿದಾಸ ಒಂದು ಹೆಜ್ಜೆ ಒಳಗಿಡುವನು. ಮಲ್ಲಿಕಾ ನೆಟ್ಟಗಣ್ಣಿಂದ ಅವನನ್ನು ನೋಡುವಳು]

ಕಾಳಿ :- ನನ್ನ ಗುರುತು ಸಿಕ್ಕಿಲ್ಲಾನ್ಸತ್ತೆ [ಮಲ್ಲಿಕಾ ಹಾಗೇ ನೋಡುತ್ತಾ ನಿಲ್ಲುವಳು. ಕಾಳಿದಾಸ ಒಳಗೆ ಬಂದು ಕೊಠಡಿಯ ಸುತ್ತ ಮುತ್ತ ನೋಡುವನಲ್ಲದೆ. ಮಲ್ಲಿಕಾಳನ್ನು ಅಡಿಯಿಂದ ಮುಡಿಯವರೆಗೂ ನೋಡಿ ಆಸನದ ಬಳಿಗೆ ಹೋಗುವನು] ಗುರುತು ಸಿಕ್ದಿರೋದು ಸಹಜಾನೆ! ಯಾಕಂದ್ರೆ ನಾನೇನೂ ಗುರುತಿದ್ದಂತಹ ವ್ಯಕ್ತಿಯಲ್ಲ. ನಾನಾದ್ರೋ ಪರಕೀಯ. ಯಾವಾನೋ ವ್ಯಕ್ತಿ.

[ಕೈಗಳನ್ನು ಹಿಂದಿಕ್ಕಿಕೊಂಡು ಕೂಡುವನು]

ನಿಜಾ ಹೇಳೋದಾದ್ರೆ, ನನಗೇ ತಿಳಿಯದ ವ್ಯಕ್ತಿಯಾಗಿದ್ದೇನೆ ನಾನು! ಇದ್ಯಾಕೆ ಹೀಗೆ ನಿಂತಿದ್ದಿ! ನನ್ನ ನೋಡಿ ತುಂಬಾ ಆಶ್ಚರ್ಯವಾಗಿರ್ಬೇಕು?

[ಮಲ್ಲಿಕಾ ಹೋಗಿ ಬಾಗಿಲು ಹಾಕುವಳು. ಏನೋ ಮರೆತವಳಂತೆ ಒಂದೆರಡು ಹೆಜ್ಜೆ ಅವನ ಹತ್ತಿರಕ್ಕೆ ಬರುವಳು]

ಮಲ್ಲಿಕಾ :- ಆಶ್ಚರ್ಯ...? ನಂಬಿಕೇನೇ ಬರ್ತಿಲ್ಲ. ನೀನು... ನೀನೋ ಇಲ್ಲಾ ನಿನ್ನನ್ನು ನೋಡ್ತಿರೋ ನಾನು ನಾನೋ"- ಅನ್ನೋದೇ ನಂಬೋಕಾಗ್ತಿಲ್ಲ.

ಕಾಳಿ :- ನೋಡ್ತಿದ್ದೀನಿ... ನೀನೂ ಅವಳಲ್ಲ, ಎಲ್ಲಾ ವ್ಯತ್ಯಾಸವಾಗಿದೆ... ಅಥವಾ ನನ್ನ ದೃಷ್ಟಿಯಲ್ಲೇ ವ್ಯತ್ಯಾಸವಿದೆಯೋ?

ಮಲ್ಲಿಕಾ :- ಏನ್ಮಾಡ್ಲೀ? ಕನಸಲ್ಲಾಂತ ನಂಬೋಕಾಗ್ತಿಲ್ಲ.

ಕಾಳಿ :- ಇಲ್ಲ, ಇದು ಕನಸಲ್ಲ. ಇದು ಸತ್ಯ. ನಾನಿಲ್ಲಿರೋದು..... ಎಷ್ಟೋದಿನಗಳ ಪ್ರಯಾಣದಿಂದ ಬಳಲಿ ಬೆಂಡಾಗಿ ಇಲ್ಲಿಗೆ ಬಂದಿರೋದು.... ಇಲ್ಲಿನ ಸತ್ಯ ಸಂಗತಿ ಏನೂಂತ ನೋಡ್ಬೇಕೂಂತಿರೋದು...ಎಲ್ಲಾ ಸತ್ಯವೇ!

ಮಲ್ಲಿಕಾ :- ಬಹಳ ತೊಯ್ದಿದ್ದಿ! ಒಣಗಿದ ಬಟ್ಟೆ ಕೊಡೋಕಂತೂ ಇಲ್ದಿರಬಹುದು. ಆದ್ರೆ ನಾನು......

ಕಾಳಿ :- ನಾನು ತೊಯ್ದಿದ್ದೀನಿ ಅನ್ನೋ ಚಿಂತೆ ಬೇಡ. ಹೀಗೆ ತೋಯುವುದೂ ಬದುಕಿನ ಮಹತ್ವಾಕಾಂಕ್ಷೆಯಾಗಬಹುದೂನ್ನೋದು ಗೊತ್ತಿದೆಯೇನು? ಎಷ್ಟೋ ವರ್ಷಗಳ ಮೇಲೆ ಈಗ ತೊಯಿದ್ದೀನಿ ಬೇಗ ಒಣಗಿಸಿಕೊಳ್ಳೋಕೆ ಇಷ್ಟವಿಲ್ಲ. ನಡ್ಡೂ ನಡ್ಡೂ ದಣ್ದಿದ್ದೆ. ಎಷ್ಟೋ ದಿನ ಜ್ವರದಿಂದ ನರಳಿದ್ದೆ, ಆದರೆ ಈ ಮಳೆಯಿಂದ ನನ್ನ ಆಯಾಸ, ದಣಿವು ಎಲ್ಲಾ ದೂರವಾದ ಹಾಗಿದೆ....

[ಮಲ್ಲಿಕಾ ಇನ್ನೂ ಎರಡು ಹೆಜ್ಜೆ ಮುಂದೆ ಅವನ ಹತ್ತಿರ ಬರುವಳು]

ಮಲ್ಲಿಕಾ :- ತುಂಬಾ ದಣಿದಿದ್ದೀಯೇನು?

ಕಾಳಿ :- ಹೌದು, ತುಂಬಾ ದಣಿವಾಗಿತ್ತು. ಈಗಲೂ ಇದೆ. ಆದ್ರೇ ಮಳೇ ಈ ದಣಿವನ್ನ ಸ್ವಲ್ಪ ಕಡಿಮೆ ಮಾಡಿದೆ ಅಷ್ಟೆ.

ಮಲ್ಲಿಕಾ :- ನೀನು ನಿಜವಾಗ್ಲೂ ಗುರುತು ಸಿಗೊಲ್ಲ.

[ಕಾಳಿದಾಸ ಕೆಲಕ್ಷಣ ಅವಳನ್ನೇ ದಿಟ್ಟಿಸುವನು. ನೋವಿನ ನಗೆ ನಕ್ಕು ಎದ್ದು ಕಿಟಕಿಯ ಬಳಿಗೆ ನಡೆಯುವನು]

ಕಾಳಿ :- ನೀನೂ ಗುರ್ತೆಲ್ಲಿ ಸಿಕ್ತಿ? ಈ ಮನೆಯಲ್ಲಿ ಎಷ್ಟು ವ್ಯತ್ಯಾಸವಾಗಿದೆ? ಎಲ್ಲವೂ ಹೇಗಿತ್ತೋ ಹಾಗೇ ಇರಬಹುದೂಂತ ಭಾವ್ಸಿದ್ದೆ.... ಹೇಗಿತ್ತೋ ಹಾಗೆ.... ಸ್ಥಳ...ಯಾವುದೂ ಯಥಾಸ್ಥಾನದಲ್ಲಿಲ್ಲ.

[ಸುತ್ತಲೂ ತಿರುಗಿ ನೋಡವನು] ನೀನೆಲ್ಲಾ ವ್ಯತ್ಯಾಸ ಮಾಡ್ಬಿಟ್ಟಿದ್ದಿ? [ಹಾಗೇ ಕೊಠಡಿಯನ್ನು ನೋಡುತ್ತಾ, ಅದರ ಮತ್ತೊಂದು ಕೊನೆಯವರೆಗೂ ಹೋಗಿ ಹಿಂದಿರುಗಿ ಬರುವನು]

ಎಲ್ಲಾ ವ್ಯತ್ಯಾಸ ಮಾಡ್ಬಿಟ್ಟಿದ್ದಿ.

ಮಲ್ಲಿಕಾ :- ಇಲ್ಲಾ ನಾನೇನೂ ವ್ಯತ್ಯಾಸ ಮಾಡಿಲ್ಲ.

[ಕಾಳಿದಾಸ ಎಚ್ಚೆತ್ತವನಂತೆ ಅವಳ ಕಡೆ ನೋಡುವನು. ಪುನಃ ಶತಪಥ ತಿರುಗಾಡುತ್ತಾನೆ]

ಕಾಳಿ :- ನೀನೇನೂ ವ್ಯತ್ಯಾಸ ಮಾಡಿಲ್ಲಾಂತ ಗೊತ್ತು. ಆದ್ರೂ, ಮಲ್ಲಿಕಾ.....

[ಅವಳ ಬಳಿಗೆ ಬರುವನು]

ಈ ಮನೆ ಇಷ್ಟು ಅಪರಿಚಿತವಾಗಿರುತ್ತೇಂತ ತಿಳಿದಿರ್ಲಿಲ್ಲ. ಇಲ್ಲಿನ ಪ್ರತಿಯೊಂದು ವಸ್ತುವಿನ ಸ್ಥಾನ ಜೋಡಣೆ ನಿರ್ದಿಷ್ಟವಾಗಿತ್ತು. ಆದ್ರೀಗ ಎಲ್ಲಾ ಅಪರಿಚಿತವಾಗೇ ಭಾಸವಾಗುತ್ತೆ. ಅಲ್ದೇ.....

[ಅವಳ ಕಣ್ಣಲ್ಲಿ ಕಣ್ಣಿಟ್ಟು ನೋಡುವನು]

ಅಲ್ದೆ ನೀನೂ ಸಹ, ನೀನೂ ಅಪರಿಚಿತಳಂತೆ ಕಾಣ್ತಿದ್ದಿ. ಅದಕ್ಕೇ ದೃಶ್ಯಕ್ಕಿಂತ ದೃಷ್ಟಿ ಬದಲಾಗಿರೋ ಸಂಭವ ಇರ್ಬೇಕೂಂತ ಹೇಳ್ತಿರೋದು

ಮಲ್ಲಿಕಾ :- ತುಂಬಾ ಆಯಾಸಪಟ್ಟಹಾಗಿದೆ. ಕೂತ್ಕೊ, ನಿನ್ನ ಕಣ್ಣೇ ನಿನ್ನ ಆರೋಗ್ಯ ಸರಿಯಿಲ್ಲಾಂತ ಹೇಳುತ್ತೆ.

ಕಾಳಿ :- ತುಂಬಾ ದಿನ ಅಲ್ಲಿ ಇಲ್ಲಿ ಸುತ್ತಾಡಿದ ನಂತರ ಇಲ್ಲಿಗೆ ಬಂದಿದ್ದೇನೆ ಕಾಶ್ಮೀರಕ್ಕೆ ಹೋಗಬೇಕಾದ್ರೆ ಯಾವ ಕಾರಣದಿಂದ ಬರ್ಲಿಲ್ವೊ, ಅದೇ ಕಾರಣದಿಂದ ಇವತ್ತು ಬಂದಿದ್ದೇನೆ.

[ಪರಸ್ಪರ ಕಣ್ಣುಗಳೊಂದಾಗುವುವು]

ಮಲ್ಲಿಕಾ :- ಮಾತುಲರು ಈಗ ತಾನೇ ಹೇಳ್ತಿದ್ರು, ನೀನು ಕಾಶ್ಮೀರಾನ ಬಿಟ್ಟಿದ್ದೀಂತ.

ಕಾಳಿ :- ಹೌದು.... ಯಾಕಂದ್ರೆ, ಈಗ ಅಧಿಕಾರದ ವ್ಯಾಮೋಹ, ಒಡೆತನ ಎಲ್ಲಾ ಬಿಟ್ಟು ಹೋಗಿದೆ. ವರ್ಷಾನು ವರ್ಷಗಳಿಂದ ನನ್ನನ್ನು ಬಿಗಿ ಹಿಡಿದಿದ್ದ ಎಲ್ಲಾ ಬಂಧನಗಳಿಂದ್ಲೂ ಇಂದು ಮುಕ್ತನಾಗಿದ್ದೀನಿ. ಕಾಶ್ಮೀರದಲ್ಲಿ ನಾನು ಸಂನ್ಯಾಸ ತೊಗೊಂಡಿದ್ದೀನಂತ್ಲೇ ತಿಳಿದಿದ್ದಾರೆ, ಆದ್ರೆ ನಾನು ಸಂನ್ಯಾಸ ತೊಗೊಂಡಿಲ್ಲ. ಮತ್ತೊಮ್ಮೆ ಕಾಳಿದಾಸನಾಗಿ ಬಾಳಬೇಕೂಂತ 'ಮಾತೃಗುಪ್ತ' ಅನ್ನೋ ಹೆಸರಿಂದ ಬಿಡುಗಡೆ ಹೊಂದ್ಬೇಕಂತ ಬಯಸಿದ್ದೀನಿ. ಯಾವುದ್ರಿಂದ ಬಿಡಿಸಿಕೊಂಡು ಹೋಗ್ಬೇಕಿಂದಿದ್ದೆನೋ, ಅದೇ ಬಂಧನದ ಸೆಳೆವಿಗೆ ಸಿಕ್ಕಿ ಮತ್ತೆ ಬಂದಿದ್ದೇನೆ. ಇಲ್ಲಿನ ಪ್ರತಿಯೊಂದು ವಸ್ತುವಿಗಿದ್ದ ಆತ್ಮೀಯತೆ ಮತ್ತೆಲ್ಲೂ ನನಗೆ ಸಿಕ್ಲಿಲ್ಲ. ಇಲ್ಲಿನ ಪ್ರತಿಯೊಂದು ವಸ್ತುವಿನ ರೂಪ ರೇಖೆಗಳೆಲ್ಲಾ ಸ್ಪಷ್ಟವಾಗಿ ನೆನಪಿದೆ. [ನಿಂತು ಅವಳ ಕಡೆ ನೋಡುವನು] ಕೊಡಗಳು.... ಹುಲಿಚರ್ಮ........ ದರ್ಭೆಯ ಹುಲ್ಲು..... ದೀಪ..... ಗೋಡೆಗಳು..... ಅದರ ಮೇಲಿನ ಚಿತ್ರಗಳು.....ನಿನ್ನ ಕಣ್ಣುಗಳೂ!...... ಹೊರಟುನಿಂತಾಗ ನಿನ್ನ ಕಂಗಳಲ್ಲಿ ಕಂಡಿದ್ದ ಭಾವನೆಗಳು ಇನ್ನೂ ನನ್ನ ಮನಸ್ಸಿನಲ್ಲಿ ಅಚ್ಚೊತ್ತಿದಂತಿದೆ. ಇಲ್ಲಿಗೆ ಹಿಂತಿರುಗಿದ ಮೇಲೆ ಎಲ್ಲವೂ ಮೊದಲಿನ ಹಾಗೇ ಇರುತ್ತೇನ್ನೋ ಸಮಾಧಾನ ನನ್ನ ಮನಸ್ಸಿಗೆ ನೀಡ್ತಲೇ ಬಂದಿದ್ದೀನಿ.

[ಯಾರೋ ಬಾಗಿಲು ಬಡಿದು ಸದ್ದು. ಭಯದಿಂದ ಆ ಕಡೆ ನೋಡುವಳು. ಕಾಳಿದಾಸ ಬಾಗಿಲೆಡೆ ಹೋಗಲು ಪ್ರಯತ್ನಿಸುವಲ್ಲಿ ಅವನನ್ನು ಮಲ್ಲಿಕಾ ತಡೆಯುವಳು]

ಮಲ್ಲಿಕಾ :- ಬಾಗಿಲು ತೆಗೀಬೇಡ. ಹೇಳ್ತಿರೋದನ್ನ ಪೂರ್ತಿ ಮಾಡು.

ಕಾಳಿ :- ಯಾರು ಬಂದಿದ್ದಾರೋ ನೋಡು

ಮಲ್ಲಿಕಾ :- ಮಳೆಗಾಲ. ಯಾರಾದೂ ಬರ್ತಾಲೇ ಇರ್ತಾರೆ. ನೀ ಮಾತಾಡು, ಅವನು ಹೊರಟು ಹೋಗ್ತಾನೆ.

[ಹೊರಗಿನಿಂದ, ಯಾವಾಗ್ಲೂ ಬಾಗಿಲು ಹಾಕಿರುತ್ತೆ, ಬಾಗಿಲು ಹಾಕಿರುತ್ತೆ' ಎಂದು ಮದಿರೋನ್ಮತ್ತ ಆಗಂತುಕನ ಕೋಪದ ದನಿ]

ಕಾಳಿ :- ಯಾರವ್ನು?

ಮಲ್ಲಿಕಾ :- ಹೇಳಿದ್ನಲ್ಲಾ, ಯಾರಾದ್ರೂ ಆಗಿರ್ಬಹುದು. ಮಳೆಗಾಲ್ದಲ್ಲಿ ಯಾರಿಗಾದ್ರೂ ಸ್ವಲ್ಪ ರಕ್ಷಣೆ ಬೇಕಾಗುತ್ತೇಂತ!

ಕಾಳಿ :- ಆದ್ರೆ, ಇವನ ದನಿ ನನಗೇನೋ ಒಂದು ಥರಾ ಇದೆ.

ಮಲ್ಲಿಕಾ :- ನೀನು ಇಲ್ಲಿನ ವಸ್ತುಗಳ ಸಂಬಂಧದ ವಿಷಯ ಮಾತಾಡ್ತಿದ್ದೆ.

ಕಾಳಿ :- ಈ ಧ್ವನಿ ನನಗೆ ತೀರ ಪರಿಚಿತಾನ್ಸುತ್ತೆ. ಎಲ್ಲಾ ವಸ್ತುಗಳ ಹಾಗೆ, ಆ ಧ್ವನಿಯು ಯಾರದಾದ್ರೂ ಪರಿಚಿತರ ಪರಿವರ್ತಿತ ರೂಪವಾಗಿರ್ಬಹುದು.

ಮಲ್ಲಿಕಾ :- ನೋಡು, ನೀನು ತುಂಬಾ ಆಯಾಸಗೊಂಡಿದ್ದಿ ಅಲ್ದೆ ಆರೋಗ್ಯಾನೂ ಸರಿಯಿಲ್ಲ. ಕೂತು ಮಾತಾಡು.

ಕಾಳಿ :- [ನಿಟ್ಟುಸಿರಿಟ್ಟು ಆಸನದ ಮೇಲೆ ಕೂಡುವನು. ಮಲ್ಲಿಕಾ ಮೊಣಕಾಲಿನ ಮೇಲೆ ಕೈಯೂರಿ ಕೆಳಗೆ ಕೂಡುವಳು] ಎಷ್ಟೋ ಸಾರಿ ನನ್ನನ್ನು ಕುರಿತು ಯೋಚಿಸಿ, ಅಂಬಿಕೆ ಹೇಳುತ್ತಿದ್ದುದು ಸರೀನ್ನೋ ನಿರ್ಧಾರಕ್ಕೆ ಬಂದಿದ್ದೀನಿ. [ಛಾವಣಿಯ ಕಡೆ ತೋಳು ಚಾಚುತ್ತಾ ನೋಡುವನು] ಇಲ್ಲಿಂದ ಹೋಗೋಕೆ ನಾನ್ಯಾಕೆಷ್ಟ ಪಡ್ಲಿಲ್ಲ?...... ನನ್ಮೇಲೇ ನನಗೆ ಭರವಸೆಯಿರ್ಲಿಲ್ಲ. ಬಡತನದಲ್ಲಿ ಬಳಲ್ತಾ, ಎಲ್ಲರ ಧಿಕ್ಕಾರವನ್ನು ನುಂಗಿಸಹಿಸ್ತಾ ಬದುಕಿದ್ದ ನಾನು ಅಲ್ಲಿನ ಗೌರವ ಪ್ರತಿಷ್ಠೆಯ ಆವರಣದಲ್ಲಿ ಹೇಗಾಗ್ತಿನನ್ನೋದರ ಕಲ್ಪನೆಯಿರ್ಲಿಲ್ಲ. ಅಂಥಾ ಆವರಣದಲ್ಲಿ ಬದುಕಿದ್ರೆ, ನನ್ನ ಜೀವನದ ದಿಕ್ಕೇ ಬದಲಾಗುತ್ತೇನ್ನೋ ಅನುಮಾನ ನನ್ನ ಮನಸ್ನಲ್ಲೆಲ್ಲೋ ಇದ್ದೇ ಇತ್ತು. ಇದಕ್ಕೆ ಕಾರಣವಿಲ್ದೇನೂ ಇರಲಿಲ್ಲ. [ಮಲ್ಲಿಕಾಳ ಕಡೆ ನೋಡುವನು] ನಾನು ಕಾಶ್ಮೀರದ ಅಧಿಕಾರವನ್ನು ವಹಿಸ್ಕೊಳ್ತಿದ್ದೀನನ್ನೋದನ್ನ ಕೇಳಿ ನಿನಗೆ ಆಶ್ಚರ್ಯವಾಗಿತ್ತಲ್ಲ! ಇದು ತುಂಬಾ ವಿಚಿತ್ರಾಂತನ್ಸಿರಬೇಕು ನಿನ್ಗೆ! ಆದರೆ ನನಗೇನೂ ಹಾಗನ್ನಿಸ್ಲಿಲ್ಲ. ಬಡತನದ ಪ್ರತಿಕ್ರಿಯೇನೇ ಹಾಗೆ. ಅಲ್ದೆ ಇದರ ಜೊತೆಗೆ ನನ್ನನ್ನು

ಹಿಯಾಳಿಸಿ ಧಿಕ್ಕರಿಸಿದವರೊಡನೆ ಸೇಡು ತೀರಿಸ್ಕೊಳ್ಬೇಕನ್ನೋ ಭಾವ್ನೇನೂ ಇತ್ತು.

[ತುಟಿಕಚ್ಚುತ್ತಾ ಎದ್ದು ನಿಲ್ಲುವನು]

ಕಾಳಿ :- [ಕಿಟಕಿಯ ಬಳಿ ಹೋಗುತ್ತಾ] ಇದ್ರಿಂದ ನಾನು ಸುಖವಾಗಿ ರ್‍ಲಾರೇನ್ನೋದೂ ಗೊತ್ತಿತ್ತು. ದೌರ್ಬಲ್ಯವಿದ್ದರೆ, ಅದು ನನ್ನಲ್ಲಿಯೇ ಹೊರತಾಗಿ ನಾನು ಹೋಗಲಿರುವ ಪರಿಸರಣದಲ್ಲಿಲ್ಲಾಂತ, ನನ್ನ ಮನಸ್ಸಿಗೆ ತಿಳಿಸೋ ಪ್ರಯತ್ನ ಮಾಡ್ದೆ. ನಾನು ಬದ್ಲಾದ್ರೆ ಸುಖವಾಗಿರ್ತೀನಿ ಅಂದ್ಕೊಂಡೆ ಆದ್ರೆ ಹಾಗಾಗ್ಲಿಲ್ಲ. ನಾನೂ ಬದ್ಲಾಗ್ಲಿಲ್ಲ. ಸುಖಾನೂ ನನ್ನ ಪಾಲಿಗೆ ಸಿಕ್ಕಿಲ್ಲ. ಅಧಿಕಾರ, ಸನ್ಮಾನ–ಇವೇ ಸಿಕ್ಕಿದ್ದು. ನಾನು ರಚಿಸಿದ ಕೃತಿಗಳ ಪ್ರತಿ ಲಿಪಿಗಳು ಇಡೀ ದೇಶದಲ್ಲೆಲ್ಲಾ ಹರಡಿದುವು. ಆದ್ರೂ ನನ್ಗೆ ಸುಖ ದೊರೀಲಿಲ್ಲ. ಬೇರೆಯವರಿಗೆ ಈ ಪರಿಸರ ಹೊಂದಿರ್‍ಬಹುದಿತ್ತು. ಆದ್ರೆ ನನಗೆ ಹೊಂದಿ ಬರ್‍ಲಿಲ್ಲ. ಒಬ್ಬ ರಾಜಾಧಿಕಾರಿಯ ಕಾರ್ಯಪ್ರಪಂಚ ನನ್ನ ಪ್ರಪಂಚದಿಂದ ಸಂಪೂರ್ಣಭಿನ್ನವಾಗಿತ್ತು. ಆದ್ರೆ "ನಾನು, ಅಧಿಕಾರ, ಅನುಕೂಲದ ಆಸೆಗೆ ಬಲಿಬಿದ್ದು, ಅತಿಕ್ರಮಿಸಿ, ನನ್ನ–ವಿಸ್ತೃತ ಪ್ರಪಂಚದಿಂದ ದೂರನಾಗಿ ಪ್ರವೇಶಿಸ್ದೇಂತ ನನ್ಗೆ ಅನ್ನಿಸ್ತಿತ್ತು. ವಿಶಾಲವಾದ ಆಗಸದತ್ತ ನನ್ನ ಕಣ್ಣು ಹಾಯಿಸಿದಾಗ, ಆ ವಿಶಾಲತೆಯಿಂದ ದೂರವಾಗ್ತಿದ್ದೀನೀಂತ ಭಾಸವಾಗ್ತಿತ್ತು, ದುಃಖವೂ ಆಗ್ತಿತ್ತು. ಇಂದಿಲ್ಲ ನಾಳೆಯಾದ್ರೂ ಪರಿಸ್ಥಿತೀನ ಹತೋಟಿಗೆ ತದ್ಕೊಂಡು ಎರಡೂ ಪ್ರಪಂಚಗಳಿಗೆ ಹೊಂದ್ಕೊಳ್ಳೋಣಾನ್ನೋದ್ನ ನನ್ಮನಸ್ಸಿಗೆ ಹೇಳ್ತಲೇ ಹೊರಟೆ. ಆದರೆ ನಾನೇ ಪರಿಸ್ಥಿತಿಯ ಗುಲಾಮನಾಗಿದ್ದೆ. ಅದರ ಪ್ರಭಾವಕ್ಕೆ ಸಂಪೂರ್ಣ ತಲೆಬಾಗ್ದೆ. ಯಾವುದನ್ನ ನಾಳೇಗೇಂತ ನಿರೀಕ್ಷಿಸಿದ್ನೋ ಅದು ಎಂದೂ ಬರಲಿಲ್ಲ. ನಾನೇ ನಿಧಾನವಾಗಿ ಕುಂಟುತ್ತಾ ನಡ್ದೆ.... ಆದ್ರೆ.....ಒಂದು ದಿನ.... ಒಂದಿನ.... ನನ್ನ ಅಧೋಗತಿಯ ಅರಿವಾಗಿತ್ತು. ಮಹತ್ತಿನೊಳಹೊಕ್ಕು ನೋಡುವ ಅಂತರ್ದೃಷ್ಟಿಯುಳ್ಳ ಹಿಂದಿನ ವ್ಯಕ್ತಿ ನಾನಲ್ಲಾನ್ನೋದು ಸ್ಪಷ್ಟವಾಗಿತ್ತು.

[ಕೆಲಕ್ಷಣ ಮೌನದಿಂದಿದ್ದು ಸುತ್ತಾಡ ತೊಡಗುತ್ತಾನೆ]

ಕಾಶ್ಮೀರಕ್ಕೆ ಹೊರಡುವಾಗ ನಾನಿತ್ತ ಬರಬಾರದೆಂದು ಕೊಂಡಿದ್ದೆ. ಇಲ್ಲಿನ ಗಡಿ ಪ್ರದೇಶ, ಪರ್ವತಶ್ರೇಣಿ ಕಣಿವೆಗೆಳೆಲ್ಲ್ವಾ, ನನ್ನ ಮುಂದೆ ಒಂದು

ಮೂಕ ಸಮಸ್ಯೆಯನ್ನೊಡ್ಡಿತ್ತು. ಆದ್ರೂ ನನ್ನ ದುರಾಶೆ ದೂರವಾಗ್ಲಿಲ್ಲ. ನನ್ನ ಬಗ್ಗೆ ನನಗೆ ಜಿಗುಪ್ಸೆಯಾಯ್ತು. ನನ್ನ ಬರವನ್ನು ಹಬ್ಬದಂತೆ ಆಚರಿಸಿದವರ ಬಗ್ಗೇನೂ ನನಗೆ ಬೇಸರವಾಯ್ತು. ಮೊಟ್ಟ ಮೊದ್ಲು ಬಿಡುಗಡೆಯಾಗಿ ನನ್ಮನಸ್ಸು ಕಾತರಿಸಿದ್ದು ಆಗ್ಲೆ. ಆದ್ರೆ ಆಗ ಬಿಡುಗಡೆ ಅಷ್ಟೂ ಸುಲಭವಾಗಿರ್‍ಲಿಲ್ಲ. ನಿನ್ನ ಕಣ್ಣು ಮೊದಲೇ ವಿಚಲಿತನಾಗಿದ್ದ ನನ್ನನ್ನು ಮತ್ತಷ್ಟು ವಿಚಲಿತಗೊಳಿಸ್ಬಹುದೂನ್ನೋ ಭಯದಿಂದ್ಲೇ ನಿನ್ನನ್ನು ಕಾಣೋಕೆ ಬರ್‍ಲಿಲ್ಲ. ಆದರಿಂದ ತಲೆ ತಪ್ಪಿಸ್ಕೊಳ್ಬೇಕೆಂದಿದ್ದೆ. ಅದರ ಪರಿಣಾಮವೇನಾದ್ರೂ ಆಗ್ಬಹುದಿತ್ತು. ನಿನ್ನ ಬಗ್ಗೆ ಅದರ ಪ್ರತಿಕ್ರಿಯೆ ಏನಾಗ್ಬಹುದು. ಬೇರೆಯವ್ರು ನಿನ್ಗೆ ಏನನ್ಬಹ್ದೊನ್ನೋದು ನನಗೆ ತಿಳಿದಿತ್ತು. ನಿನ್ನ ಮನಸ್ನಲ್ಲಿ ನನ್ನ ವಿರುದ್ಧ ಭಾವನೆಗಳಾವುವೂ ಬರ್‍ಲಾರದೆಂದೂ ಖಂಡಿತವಾಗಿ ತಿಳಿದಿತ್ತು. 'ಎಂದೋ– ಒಂದು ದಿನ ಬರ್‍ಬಹುದು, ಆಗಲೇ ನಿನಗೆ ತಿಳಿಸಿ, ನನ್ನಲ್ಲಿ ನಂಬಿಕೆ ಬರೋಹಾಗೆ ಮಾಡೋಣಾನ್ನೋ ಕನ್ಸು ಕಾಣ್ತಿದ್ದೆ. ಮನಸ್ಸಿನ ಈ ಹೋರಾಟ ಕೇವಲ ಒಬ್ಬರಿಗೆ ಸಂಬಂಧ ಪಟ್ಟದ್ದೂಂತ ಭಾವಿಸಿದ್ರಿಂದ ಬದಲಾವಣೇನೂ ಒಬ್ಬರಲ್ಲಿ ಮಾತ್ರ ಸಾಧ್ಯವಾಗಿದೆ. ಆದ್ರಿಂದ್ಲೇ, ಇಲ್ಬಂದು ನನಗೆ ತುಂಬಾ ನಿರಾಸೆಯಾಗಿದೆ.

[ಮತ್ತೆ ಕಿಟಕಿಯ ಬಳಿಗೆ ಹೋಗುವನು]

ನಾನು ರಾಜ ವೈಭವದ ನಡುವೆಯಿದ್ದು ಬಹಳ ಬರ್‍ದಿದ್ದೀನೀಂತ ಜನಾ ತಿಳ್ಕಿದ್ದಾರೆ. ಆದ್ರೆ, ಅಲ್ಲಿದ್ದು ನಾನು ಏನನ್ನೂ ಬರೆದಿಲ್ಲಾನ್ನೋದು ನನಗ್ಮಾತ್ರಾಗೊತ್ತು. ಏನಾದ್ರೂ ಬರ್‍ದಿದ್ರೆ, ಅದೂ ಇಲ್ಲಿನ ಅನುಭವದಿಂದ ಮಾತ್ರ, ಇಲ್ಲಿನ ಹಿಮಾಲಯವೇ 'ಕುಮಾರ ಸಂಭವದ' ಹಿನ್ನೆಲೆ. ಅಲ್ಲಿನ ತಪಸ್ವಿನಿ ಉಮೆ ಬೇರಾರೂ ಅಲ್ಲದೆ ನೀನೇ ಆಗಿದ್ದಿ. 'ಮೇಘದೂತ' ದಲ್ಲಿನ ಯಕ್ಷನನೋವು ನನ್ನ ನೋವೇ ಆಗಿತ್ತು. ವಿರಹ ಪೀಡಿತ ಯಕ್ಷಿಣಿ ನೀನೆಂದು ನನ್ನ ಭಾವನೆ. ನಾನು ಇಲ್ಲಿದ್ರು ನಿನ್ನನ್ನು ಉಜ್ಜಯನಿ ಯಲ್ಲಿರುವಂತೆ ಕಲ್ಪಿಸಿಕೊಳ್ಳಲೇನೋ ಪ್ರಯತ್ನಿಸಿದೆ. ನೀನೇ ಅಭಿಜ್ಞಾನ ಶಾಕುಂತಲದಲ್ಲಿ ,ಬರುವ ಶಕುಂತಲೆಯ ರೂಪದಲ್ಲಿ ನನ್ನೆದುರಿಗಿದ್ದೆ. ನಾನು ಬರೆದಾಗಲೆಲ್ಲಾ ನಮ್ಮಿಬ್ಬರ ಜೀವನವನ್ನೇ ಪುನರಾವರ್ತನೆಗೊಳಿಸಿದೆ. ಈ ನಮ್ಮಿಬ್ಬರ ಬದುಕಿನ ಕಲ್ಪನೆಯಿಲ್ಲದೆಯೇ ಬರೆದ ನನ್ನ ಕೃತಿಗಳೆಲ್ಲವೂ ನೀರಸವಾಗಿದ್ದುವು. ರಘುವಂಶದ 'ಅಜನ ವಿಳಾಪ' ನನ್ನ ವೇದನೆಯ

ಅಭಿವ್ಯಕ್ತಿಯಾಗಿತ್ತು. ಅಲ್ಲದೆ....

[ಎರಡು ಕೈಗಳಿಂದ ಮಲ್ಲಿಕಾ ಮುಖ ಮುಚ್ಚಿ ಕೊಳ್ಳುತ್ತಾಳೆ. ಕಾಳಿದಾಸ ಮಾತನಾಡುತ್ತಾ ನಿಂತು ಬಿಡುವನಲ್ಲದೆ ಅವಳತ್ತ ಒಮ್ಮೆ ನೋಡುವನು]

ಇದನ್ನೆಲ್ಲಾ ನೀನು ಓದ್ಬೇಕಂತ ನಾನು ಬಯಸ್ದೆ. ಆದರೆ ಬಂಧನದ ಎಳೆ ಹೇಗೆ ಮುರ್ದಿದೇಂದ್ರೆ

[ಮಲ್ಲಿಕಾ ಕೈಗಳನ್ನು ಸರಿಸಿ ಇಲ್ಲವೆಂಬಂತೆ ತಲೆಯಾಡಿಸುವಳು]

ಮಲ್ಲಿಕಾ :- ಇಲ್ಲ ಆ ಎಳೆ ಎಂದೂ ಮುರಿದಿಲ್ಲ

[ಎದ್ದು ಬಟ್ಟೆಗಳಿಂದ ಸುತ್ತಿದ್ದ ಗ್ರಂಥದ ಪುಟಗಳನ್ನು ತಂದು ಕಾಳಿದಾಸನ ಕೈಗಿಡುವಳು. ಕಾಳಿದಾಸ ಪುಟ ತಿರುವಿ ನೋಡುವನು]

ಕಾಳಿ :- 'ಮೇಘದೂತ' ಮೇಘದ ಈ ಪ್ರತಿ ನಿನ್ನ ಕೈಗೆ ಹೇಗೆ ಬಂತು.

ಮಲ್ಲಿಕಾ :- ನಿನ್ನ ಎಲ್ಲಾ ಕೃತಿಗಳೂ ನನ್ನಲ್ಲಿವೆ. ರಘುವಂಶ, ಶಾಕುಂತಲದ ಪ್ರತಿಗಳು ಕೆಲವೇ ತಿಂಗಳ ಹಿಂದೆ ದೊರೆತವು

ಕಾಳಿ :- ನಿನ್ನ ಬಳಿ ಎಲ್ಲಾ ಕೃತಿಗಳಿವೆಯೇ? ಆದ್ರೆ ಅವು ಇಲ್ಲಿ ಹೇಗೆ ಸಿಕ್ಕಿದ್ವು?.... ಏನಾದ್ರೂ....

ಮಲ್ಲಿಕಾ :- ಉಜ್ಜಯಿನಿಯ ವ್ಯಾಪಾರಿಗಳು ಯಾವಾಗ್ಲಾದ್ರೂ ಈ ಕಡೆಯಿಂದ ಹೋಗ್ತಿರ್ತಾರೆ.

ಕಾಳಿ :- ಅವ್ರ ಹತ್ರ ಇವು? ಇವು ಸಿಕ್ಕಿ ಬಿಡ್ತ್ವೆ?

ಮಲ್ಲಿಕಾ :- ನಾನೇ ಹೇಳಿ ತರಿಸಿದೆ. ವರ್ಷಕ್ಕೋ ಎರಡು ವರ್ಷಕ್ಕೋ ಒಮ್ಮೆ ಈ ಪ್ರತಿಗಳು ಸಿಕ್ಕುತ್ವೆ.

ಕಾಳಿ :- ಇದಕ್ಕೆಲ್ಲಾ ಹಣ..?

ಮಲ್ಲಿಕಾ :- ವರ್ಷಕ್ಕೊ ಎರಡು ವರ್ಷಕ್ಕೊ ಈ ಪ್ರತಿಗ್ಳು ಸಿಕ್ತಿದ್ದುದರಿಂದ ಹಣಕೂಡಿ ಸೋಕೆ ಸಾಕಷ್ಟು ಅವಕಾಶ ಇರ್‍ತಿತ್ತು.

[ತಲೆ ಬಗ್ಗಿಸಿ ಕೊಂಡು ಆಸನದ ಮೇಲೆ ಕೂಡುವನು.]

ಕಾಳಿ :- ವರ್ಷಗಳಿಂದ ಕಾಡುತ್ತಿದ್ದ ಕೊರತೆಗಳು ಇಂದು ಇನ್ನೂ ಹೆಚ್ಚಾಗಿರೋ ಹಾಗೆ ಕಾಣ್ತಿದೆ ಮಲ್ಲಿಕಾ. ಎಷ್ಟೋ ವರ್ಷಗಳ ಹಿಂದೇನೇ ಇಲ್ಲಿಗೆ ನಾನ್ಬರ್ಬೇಕಿತ್ತು ಮಲ್ಲಿಕಾ. ಹಿಂತಿರುಗಿದ್ದಿದ್ರೆ ಮಳೆಯಲ್ಲಿ ತೋಯುತ್ತಿದ್ದೆ. ತೊಯ್ದು ಬರೀತಿದ್ದೆ. ಯಾವುದನ್ನ ಇಲ್ಲೀವರೆಗೂ ಬರೆಯೋಕಾಗ್ಲಿಲ್ವೋ ಯಾವುದು ಆಷಾಢದ ಮುಗಿಲಂತೆ ನನ್ನ ಮನಸ್ಸಿನಲ್ಲಿ ಮೆಲ್ಲನೆ

ಸುಳಿದಾಡುತ್ತಿತ್ತೋ ಅದನ್ನು ಬರೆದು ಮುಗಿಸ್ತಿದ್ದೆ.

[ನಿಟ್ಟುಸಿರಿಟ್ಟು ಆಸನದ ಮೇಲಿರುವ ಪುಟಗಳನ್ನು ತಿರುಗಿಸುತ್ತಾನೆ]

ಆದರೆ ಮಳೆಯಿಲ್ಲ... ಮಳೇ ಬರೋಕೆ ಹವಾಗುಣಸರಿಯಿಲ್ಲ. ಸರಿಯಾಗಿ ಗಾಳಿ ಬೀಸ್ತಿಲ್ಲ... ಇದು ಯಾವ ರಚನೆ?... ಏನೂ ಬರೆದಿಲ್ಲ?

ಮಲ್ಲಿಕಾ :- ಇವುಗಳ್ನ ನಾನೇ ತಯಾರಿಸಿ ಪೋಣಿಸ್ದೇನೆ. ರಾಜಧಾನಿಯಿಂದ ಬಂದಾಗ ನಿನಗೆ ಕೊಡೋಣಾಂತ, ಕೊಟ್ಟು ಇದರಲ್ಲಿ ಒಂದು ಕೃತಿ ರಚಿಸೋಕೆ ಹೇಳೋಣಾಂತ ಯೋಚಿಸ್ತಿದ್ದೆ. ಆದ್ರೆ ಆಗ... ನೀನಿಲ್ಲಿಗೆ ಬಂದೂ ಬಾರ್ದೆ ಹೋದೆ. ಇದು ಇಲ್ಲೇ ಬಿದ್ದಿತ್ತು. ಈಗೀ ಪುಟಗಳು ಹರಿಯೋಕೆ ಪ್ರಾರಂಭಿಸಿದೆ. ಇದು ನಿನಗೆ ಕೃತಿ ರಚನೇಗೇಂತ ಹೇಳೋಕೂ ಈಗ ನಾಚಿಕೆಯಾಗ್ತಿದೆ. [ಕಾಳಿದಾಸ ಪುಟ ತಿರುವುತ್ತಾನೆ.]

ಕಾಳಿ :- ನಾನು ಮಹಾಕಾವ್ಯ ರಚಿಸ್ಲೀಂತ ನೀನೇ ಕೈಯಾರೆ ಮಾಡಿದ್ಯಾ? ಇದರಲ್ಲಿ ಅಲ್ಲಲ್ಲಿ ಬಿದ್ದಿರೋ ಹನಿಗಳು ಖಂಡಿತವಾಗೀ ನಿನ್ನ ಕಂಬನೀನೇ. ಈಗಾಗಲೇ ನಿನ್ನ ಕಂಬನಿಯಿಂದಲೇ ಇದರಲ್ಲಿ ಒಂದು ಕಾವ್ಯ ಬರೆದ್ದಾಗಿದೆ. ಕೇವಲ ಕಂಬನಿಯೇ ಅಲ್ಲ, ಬೆವರಿಂದ್ಲೂ ಹಳೇದ್ದಾದಾಗಿದೆ. ಹೂದಳದ ಬಣ್ಣವೂ ಮೂಡಿದೆ! ಎಷ್ಟೋ ಕಡೆ ನಿನ್ನ ಉಗುರಿನ ಗುರುತುಗಳಿವೆ! ಹಲ್ಲಿನ ಗುರುತಿದೆ. ಇದರ್ಜೊತೆಗೆ ಗ್ರೀಷ್ಮದ ನೆರಳು ಬೆಳಕು, ಹೇಮಂತದ ಪತ್ರಧೂಲಿ ಮತ್ತು ಈ ಮನೆಯ......

ಇವು ಬರಿದೆಲ್ಲಿದೆ ಮಲ್ಲಿಕಾ ? ಇದರ್ಮೆಲೆ ಆಗ್ಲೇ ಒಂದು ಮಹಾಕಾವ್ಯ ರಚನೆ ಆಗಿ ಹೋಗಿದೆ...... ಅನೇಕ ಸರ್ಗಗಳ ಮಹಾಕಾವ್ಯ.

[ಗ್ರಂಥವನ್ನಿಟ್ಟು ಸುತ್ತಾಡುವನು]

ಈ ಪುಟಗಳಲ್ಲಿ ಮತ್ತೇನಾದರೂ ಬರೆಯೋಕೆ ಸಾಧ್ಯವೇ?

[ಕಿಟಕಿಯ ಬಳಿಗೆ ಹೋಗಿ ಕ್ಷಣಕಾಲ ಹೊರಗೆ ನೋಡುವನು] ನಂತರ ಅವಳ ಕಡೆ ತಿರುಗುವನು.]

ಆದರೆ ಇದಕ್ಕೂ ಮುಂದೆ, ಇನ್ನೂ ಜೀವನಾನ್ನೋದು ಉಳ್ದಿದೆ. ಮತ್ತೆ ಹೊಸ ಜೀವನ ಆರಂಭಿಸಬಹುದು.

[ಒಳಗಿಂದ ಮಗುಪಿನ ಅಳುಧ್ವನಿ. ಮಲ್ಲಿಕಾ ಎದ್ದು ಕೂಡಲೇ ಗಾಭರಿಗೊಂಡಂತೆ ಆ ಕಡೆ ಹೊರಡುವಳು. ಕಾಳಿದಾಸ ಅರ್ಥವಾಗ ದವನಂತೆ ಆ ಕಡೆ ನೋಡುವನು]

ಕಾಳಿ :- ಮಲ್ಲಿಕಾ! [ಮಲ್ಲಿಕಾ ನಿಂತು ಅವನ ಕಡೆ ನೋಡುವಳು]

ಮಲ್ಲಿಕಾ :- ಇದು ನನ್ನ ವರ್ತಮಾನಸ್ಥಿತಿ!

[ಒಳಗೆ ಹೊರಡುವಳು ನಂತರ ಜೋರಾಗಿ ಬಾಗಿಲು ತನಗೆ ತಾನೇ ತೆಗೆದುಕೊಳ್ಳುವುದು. ಹೊಸ್ತಿಲಲ್ಲಿ ಮದಿರೋನ್ಮತ್ತ ವಿಲೋಮ ಕಾಣಿಸಿಕೊಳ್ಳುವನು]

[ಬಟ್ಟೆಗಳೆಲ್ಲಾ ಕೆಸರಿನಿಂದ ತುಂಬಿದೆ ತೂರಾಡುತ್ತಾ ಒಳಗೆ ಪ್ರವೇಶ]

ವಿಲೋಮ:- ಮಳೆಗಾಲ್ದಲ್ಲಿ ಜಾರೋದು... ಬೀಳೋದು... ಜಾರಿ ಹಳ್ಳಕ್ಕೇ ಬೀಳೋದು... ಎಷ್ಟು ಸಾರಿ ಹೇಳಿಲ್ಲ 'ಅಣ್ಣ ವಿಲೋಮ, ತುಂಬಾ ಎತ್ತರಕ್ಕೆ ಹೋಗ್ಬೇಡಾಂತ' ಆದ್ರೆ ವಿಲೋಮ ಕೇಳ್ಬೇಕೇಕೆ? ಮೊದ್ಲು ಬಂದ್ರೆ ಬಾಗಿಲು ಮುಚ್ಚಿದೆ. ಮತ್ತೆ ಹಿಂತಿರುಗಿ ಹೋದ್ರೆ ಏನಾಗುತ್ತೆ?... ಈದಿನ ಹೇಗಿದೇಂದ್ರೆ.....

[ಕಾಳಿದಾಸನನ್ನು ನೋಡಿ ಮಾತಾಡುತ್ತಾ ನಿಂತು ಬಿಡುವನು. ಸೂಕ್ಷ್ಮವಾಗಿ ಏನನ್ನೋ ಗಮನಿಸುವಂತೆ ನೋಡುವನು]

ನನ್ನಕಣ್ಗೇನಾಗಿದೆ? ಯಾವಾಗ್ಲಾದ್ರೂ ಒಮ್ಮೊಮ್ಮೆ ಅಪರಿಚಿತ ವ್ಯಕ್ತಿಗೂ ಪರಿಚಿತರಂತೇ ಕಾಣ್ತಾರೆ. ಇನ್ನೊಮ್ಮೆ ಪರಿಚಿತರು ಅಪರಿಚಿತರಂತೆ ಕಾಣೋದಿಲ್ಲ....ಈಗ ಈತ ಎಷ್ಟೋ ಪರಿಚಿತನಾದರೂ, ಪರಿಚಿತನಂತೇ ಕಾಣ್ತಿಲ್ಲ. ಮುಖವೇನೋ ಅದೇ.... ಆದ್ರೆ ವ್ಯಕ್ತಿ ಹೊಸಬನಂತೆ ಕಾಣ್ತಿದ್ದಾನೆ....... ಏನಣ್ಣ ನನ್ನ ಗುರ್ತಿದೆಯಾ?

[ಒಳಗಿನಿಂದ ಮಲ್ಲಿಕಾಳ ಪ್ರವೇಶ ವಿಲೋಮನನ್ನು ನೋಡಿ ಅಲ್ಲಿಯೇ ಚಿತ್ರ ಪ್ರತಿಮೆಯಂತೆ ನಿಲ್ಲುವಳು]

ವಿಲೋಮ:- ಧ್ವನಿ, ಮಾತೂ ಪರಿಚಿತವಾಗೇ ಇದೆ.

[ಸ್ಥಿರ ದೃಷ್ಟಿಯಿಂದ ನೋಡಲು ಪ್ರಯತ್ನಿಸುವನು. ಕೂಡಲೇ ಅಟ್ಟಹಾಸದ ನಗೆ ನಗುವನು]

ಹಾಗಾದ್ರೆ... ನೀನು?......ಜಾರಿಬಿದ್ದು ಘಾಯ ಗೊಂಡ ನೋವೆಲ್ಲಾ ಹೋಯ್ತು....... ತುಂಬಾ ದಿವ್ಸದಿಂದ ನಿನ್ನ ನೋಡೋ ಆಸೆಯಾಗಿತ್ತು. ಬಾ... ಬಾ...

[ಅವನ ಕಡೆ ಕೈ ಚಾಚುವನು. ಕಾಳಿದಾಸ ಅವನೆದುರಿನಿಂದ ದೂರ ಸರಿದು ನಿಲ್ಲುವನು]

ಅಪ್ಪೊಕ್ಕಳ್ಲಿಲ್ವೆ?....ಓ ನನ್ನಬಟ್ಟೆ ಕೊಳೆಯಾಗಿದೇಂತ್ಲೆ? ಇಲ್ಲ ನನ್ನಬಗ್ಗೆ ಅಸಹ್ಯವೋ?...... ಆದರೆ ಇಷ್ಟರಿಂದ ಮಾತ್ರ ನನ್ನ ನಿನ್ನ ಸಂಬಂಧ ಮುರಿದು ಬೀಳೊಲ್ಲ....ನೀನೊಮ್ಮೆ ಹೇಳಿದ್ದೆಯಲ್ವಾ? ನಾವಿಬ್ಬರೂ ಪರಸ್ಪರ

ಹತ್ತಿರದವ್ರೂಂತ? ಇಷ್ಟು ವರ್ಷವಾದ್ರೂ ನೋಡು, ನಾನು ಆ ಸ್ನೇಹದಿಂದ ದೂರವಾಗಿಲ್ಲ. ಈಗಂತೂ ನಾವಿಬ್ಬರೂ ಇನ್ನೂ ಹೆಚ್ಚಿನ ಹತ್ತಿರದ ಬಂಧುಗಳಾಗಿದ್ದೇವೆ.

[ಮಲ್ಲಿಕಾಳ ಕಡೆ ನೋಡುವನು]

ಅಲ್ವೆ ಮಲ್ಲಿಕಾ....ನಾ ಹೇಳ್ತಿರೋದು ಸರೀತಾನೆ? ನೀನ್ಯಾಕಷ್ಟುದೂರ ಬೆಪ್ಪಾಗಿ ನಿಂತಿದ್ದಿ? ಈಗಂತೂ ವಿಲೋಮ ಈ ಮನೆಗೆ ಬೇಡದ ಅತಿಥಿಯೇನಲ್ವಲ್ಲಾ? ಈಗ ಬರೋ ಅಧಿಕಾರವಿದೇಲ್ವಾ? ಈ ಮನೇಲಿ ಈಗ ಕಾಳಿದಾಸನ ಸ್ವಾಗತ ಬಯ್ಸಿ ಅವನಿಗೆ ಆತಿಥ್ಯವನ್ನೂ ನೀಡಬಲ್ಲೆ... ಅಲ್ವಾ?

[ಕಾಳಿದಾಸನ ಕಡೆ ನೋಡುವನು]

ಇದೆಂಥಾ ಆಕಸ್ಮಿಕ ಘಟನೆ! ಆಗ್ಲೂ ಇಲ್ಲೇ ಕಂಡಿದ್ದೆ. ಈಗ್ಲೂ ಇಲ್ಲೇ ಕಾಣ್ತಿದ್ದೇನೇಂತ ಹೇಳ್ಬಹ್ದು. ಆದ್ರೆ ಇದೇನು ಆಕಸ್ಮಿಕವೇನಲ್ಲ. ನಿಜ ಹೇಳ್ಬೇಕೊಂದ್ರೆ... ನೀನು ಯಾವಾಗ್ಬಂದ್ರೂ ನನ್ನನ್ನು ಇಲ್ಲೇ ಕಾಣ್ತಿ. [ಮಲ್ಲಿಕಾಳ ಕಡೆಗೆ ನೋಡುತ್ತಾ] ಇನ್ನೂ ಕಾಳಿದಾಸನ ಆತಿಥ್ಯಕ್ಕೆ ಏನೂ ವ್ಯವಸ್ಥೆ ಮಾಡಿಲ್ಲ! ಎಷ್ಟೋ ವರ್ಷಗಳ ಮೇಲೆ ಒಬ್ಬ ಅತಿಥಿ ಮನೆಗೆ ಬಂದಿರೋವಾಗ ಅವನಿಗೆ ಆತಿಥ್ಯ ನೀಡ್ದಿರೋದೇ? ನಿಂಗೊತ್ತೇನು? ಇಲ್ಲಿನ ಮರಿ ಹರಿಣಗಳನ್ನು ಕಂಡ್ರೆ ಕಾಳಿದಾಸನಿಗೆ ಎಷ್ಟು ಪ್ರೀತೀಂತ? [ಮತ್ತೆ ಕಾಳಿದಾಸನೆಡೆ ನೋಡುವನು] ಒಂದು ಮರಿ ಹರಿಣ ಈ ಮನೇಲೂ ಇದೆ... ಮಲ್ಲಿಕಾಳ ಮಗೂನ ನೀನಿನ್ನೂ ನೋಡಿಲ್ಲಲ್ಲಾ? ಅದರ ಕಣ್ಣು ಯಾವ ಮರಿ ಹರಿಣಕ್ಕಿಂತ್ಲೂ ಸುಂದರವಾಗಿದೆ. ಅಷ್ಟಾವಕ್ರ ಏನ್ಹೇಳ್ತಾನೆ ಗೊತ್ತೇನು?

ಅವನೇನ್ಹೇಳ್ತಾನೆ.....

ಮಲ್ಲಿಕಾ :- ಆರ್ಯ ವಿಲೋಮರೇ!

[ವಿಲೋಮನ ವ್ಯಂಗ್ಯ ನಗೆ] ಅಷ್ಟಾ ವಕ್ರ ಏನ್ಹೇಳ್ತಾನೇನ್ನೋದು ಕಾಳಿದಾಸನಿಗೆ ತಿಳೀಬಾರ್ದೂಂತ ನಿನ್ನಾಸೆ. ಆದ್ರೆ ನನ್ಗೆ ಅವ್ನ ಮಾತ್ನಲ್ಲಿ ನಂಬಿಕೆಯಿಲ್ಲ. ಅದಕ್ಕೆ ಕಾಳಿದಾಸನೇ ಈ ವಿಷಯಾನ ಯೋಚಿಸಿ ಮಗುನ್ನೋಡಿ, ಇದು ವಿಲೋಮನ್ನ ಹೋಲುತ್ಯೆ, ಇಲ್ಲಾ ತಾಯಿ.....ಅನ್ನೋಮಾತು ಎಷ್ಟು

ನಿಜಾನ್ನೋದ್ನ ಹೇಳೋಕೆ ಸಾಧ್ಯವಾಗುತ್ತೇನೋಂತ ನಾನು ಹೇಳ್ತಿದ್ದೆ.

[ಮಲ್ಲಿಕಾ ಮುಖ ಮುಚ್ಚಿಕೊಂಡು ಆಸನದ ಮೇಲೆ ಕೂಡುವಳು. ವಿಲೋಮ ಕಾಳಿದಾಸನ ಬಳಿಗೆ ಹೋಗುವವನು]

ವಿಲೋಮ:- ನೋಡೋ ಹಾಗಿದ್ರೆ ನಡಿ [ಕಾಳಿದಾಸ ಕೃದ್ಧ ದೃಷ್ಟಿಯಿಂದ ಅವನೆಡೆ ನೋಡುವನು]

ಕಾಳಿ :- ಇಲ್ಲಿಂದ ಹೊರಟ್ಹೋಗು ವಿಲೋಮ.

ವಿಲೋಮ:- ಹೋಗ್ಬೇಕೆ? [ನಗುವನು]

ಈ ಮನೆಯಿಂದ್ಲೋ ಅಥವಾ ಗ್ರಾಮದಗಡಿಯಿಂದ್ಲೋ? ಆಡಳಿತ ಬಲಿಷ್ಠವಾಗಿರುತ್ತೆ, ಅಧಿಕಾರದಲ್ಲಿ ಹೆಚ್ಚು ಸಾಮರ್ಥ್ಯ ಇರುತ್ತೇಂತ ಕೇಳಿದ್ದೆ.

ಕಾಳಿ :- ನಾ ಹೇಳ್ತಿದ್ದೇನೆ ನೀನೀಗ ಇಲ್ಲಿಂದ ಹೊರಟ್ಹೋಗಂತ!

ವಿಲೋಮ:- ಯಾಕೆ, ನೀನಿಲ್ಲಿಗೆ ಬಂದಿರೋದ್ರಿಂದ್ಲೋ? ವರ್ಷಗಳಿಂದ ಬಿಟ್ಹೋದ ಭೂಮಿ ನಿನ್ನದೂಂತ ಕಾಣ್ತಿರೋದ್ರಿಂದ್ಲೋ?.... ಇಲ್ಲಿ ನಿನ್ನಧಿಕಾರ ಶಾಶ್ವತಾಂತ್ಲೊ... [ನಗುವನು] ನಿನಗಲ್ದೆ, ಹೊರಗೆ ಯಾರ್ಗೂ ಬದುಕಿಲ್ಲ.... ನೀನಲ್ದೆ ಬೇರೆ ಯಾರೂ ಇಲ್ಲ.... ಆದರೆ 'ಕಾಲ' ಅಷ್ಟು ಕಠೋರ್ವಾಗಿಲ್ಲ ಬೇರೆಯವರಿಗೂ ಅಧಿಕಾರ ಕೊಟ್ಟಿದೆ. ಬದುಕನ್ನ ನೀಡಿದೆ. ಧೂಪ, ದೀಪ, ನೈವೇದ್ಯಗಳ್ನ ಇಟ್ಕೊಂಡು ಹೊಸ್ಲಲ್ಲೇ ನಿಂತಿಲ್ಲ. ಬೇರೆಯವರಿಗೂ ಅವಕಾಶ ಕೊಡ್ತಾ ಬಂದಿದೆ. ಅದರ ರಚನಾತ್ಮಕ ಕಾರ್ಯದಿಂದ ನಿನಗೆ ಅಸೂಯೆಯಾಗಿರ್ಬಹುದು. ಇದಕ್ಕೆ ಕಾರಣ.... ಎಲ್ಲೆಲ್ಲಿ ನಿನ್ನನ್ನು ನೀನು ಕಾಣ್ಬೇಕೂಂತ ಬಯಸಿದೆಯೋ ಅಲ್ಲಿ ನಿನ್ನನ್ನು ಕಾಣಲಾಗ್ಲಿಲ್ಲ. ನೀನೊಬ್ಬನೇ ವ್ಯಾಪಿಸಿರೋಕಾಗ್ಲಿಲ್ಲ.

[ಕೆಲಕ್ಷಣ ಅವನ ಕಡೆ ನೋಡುತ್ತಿದ್ದು ನಗುವನು]

ವಿಲೋಮ:- ನಾನು ಇಲ್ಲಿಂದ ಹೋಗ್ಲೇಬೇಕೂನ್ನೋದು ನಿನ್ನಾಸೆಯಾದ್ರೆ ಹೋಗ್ತೇನೆ. ಆದ್ರೆ ನೀನ್ಹೇಳ್ಬೇಕಿಲ್ಲ. ಈ ದಿನ ನೀನು ನಮ್ಮನೆ ಅತಿಥಿ. ಅತಿಥಿಯ ಆಸೆ ನೆರ್ವೇರ್ಸೋದು ಮನೆ ಯಜಮಾನನ ಕೆಲಸ. ಅದಕ್ಕೇ ಹೋಗ್ತೇನೆ.

[ಬಾಗಿಲ ಕಡೆ ಹೊರಟು ಅಲ್ಲಿಂದ ಮಲ್ಲಿಕಾಳತ್ತ ನೋಡುವನು]

ಮಲ್ಲಿಕಾ ಅತಿಥಿಗೆ ಯಾವುದರ ಕೊರತೆ ಇಲ್ಲದ್ಹಾಗೆ ವಿಚಾರ್ಸಿಕೊ.... ಎಷ್ಟೋ ವರ್ಷಗಳ ಮೇಲೆ ಮೊದಲ್ಸಲ ಅತಿಥಿಯಾಗಿ ಬಂದಿದ್ದಾನೆ. ಇನ್ನು ಮುಂದೆ ಬರ್ತಾನೋ ಇಲ್ವೋ ಹೇಳೋಕಾಗೊಲ್ಲ.

[ಅರ್ಥ ಗರ್ಭಿತನಾಗಿ ಕಾಳಿದಾಸನ ಕಡೆ ನೋಡುತ್ತಾ ಹೊರಟು ಹೋಗುವನು. ಮಲ್ಲಿಕಾ ಮುಖವೆತ್ತಿ ಕಾಳಿದಾಸನತ್ತ ನೋಡುವಳು. ಇಬ್ಬರೂ ಹಾಗೇ ನೋಡುತ್ತಿದ್ದು ಸ್ವಲ್ಪ ಹೊತ್ತಿನ ನಂತರ]

ಮಲ್ಲಿಕಾ :- ಏನ್ಯೋಚಿಸ್ತಿದ್ದಿ?

ಕಾಳಿ :- [ಕಿಟಕಿಯನ್ನು ಸಮೀಪಿಸುತ್ತಾ] ಯೋಚಿಸ್ತಾ ಇದ್ದೀನಿ.... ಇಂಥದ್ದೇ ಆಷಾಢಮಾಸದಲ್ಲಿ ಒಂದು ದಿನ.... ಹೀಗೇ ಘಟ್ಟಗಳೆಲ್ಲಾ ಮೋಡಗಳಿಂದ ಕವಿದಿತ್ತು. ಆ ಕಾಲದ ಅಂಧಕಾರ ಎಲ್ಲೆಲ್ಲೂ ತುಂಬಿತ್ತು. ಘಟ್ಟಗಳ ಕಡೆಯಿಂದ ಒಂದು ಘಾಯಗೊಂಡ ಮರಿಹರಿಣವನ್ನೋಡಿ ಇಲ್ಲಿಗೆ ತಂದಿದ್ದೆ. ನೀನದನ್ನು ಉಪಚರಿಸಿದ್ದೀ.

[ಮಲ್ಲಿಕಾ ಎದ್ದು ಅವನನ್ನು ಸಮೀಪಿಸುವಳು]

ಮಲ್ಲಿಕಾ :- ಇನ್ನೂ ಏನೋಯೋಚಿಸ್ತಿದ್ದೆ?

ಕಾಳಿ :- ಹೂಂ ಇನ್ನೂ ಯೋಚಿಸ್ತಿದ್ದೀನಿ.... ಈ ಕಣಿವೆಗಳ ವಿಸ್ತಾರ ಅಷ್ಟೇ ಇದೆ. ಪರ್ವತಶಿಖರಗಳೆಡೆಗೆ ಹೋಗೋದಾರಿಯೂ ಅದೇ ಇದೆ. ಗಾಳಿಯಲ್ಲೂ ಅದೇ ಶೀತಲತೆಯಿದೆ. ಗುಡುಗು ಸಿಡಿಲು ಮಿಂಚುಗಳೆಲ್ಲವೂ ಅವೇ ಇವೆ.

ಮಲ್ಲಿಕಾ :- ಮತ್ತೆ.....?

ಕಾಳಿ :- ಮತ್ತೆ.....? ಕಂಪಿಸುತ್ತಿರುವ ಚೇತನವು ಅದೇ ಆಗಿದೆ. ಅದೇ ಹೃದಯ, ಅದೇ ಆವೇಶ...ಆದರೆ.

[ಮಲ್ಲಿಕಾ ಸುಮ್ಮನೆ ಅವನೆಡೆಗೆ ನೋಡುತ್ತಿರುವಳು. ಕಾಳಿದಾಸ ಅಲ್ಲಿಂದ ಆಸನದ ಬಳಿ ಒಂದು ಗ್ರಂಥವನ್ನೆತ್ತಿ ಕೊಳ್ಳುವನು]

ಆದರೆ ಈ ಪುಟಗಳಲ್ಲಿ ಮೂಡಿರುವ ಮಹಾಕಾವ್ಯ ಅಂದಿನದಲ್ಲ

ಮಲ್ಲಿಕಾ :- ನೀನು ಈಗ ಮತ್ತೆ ಮೊದಲಿಂದ ಪ್ರಾರಂಭಿಸಬೇಕೂಂತ ಹೇಳ್ತಿದ್ದೆ [ಕಾಳಿದಾಸ ನಿಟ್ಟುಸಿರಿಡುವನು]

ಕಾಳಿ :- ಹೌದು ಆರಂಭಿಸಬೇಕೂಂತ ಆಸೆಯಿಟ್ಕೊಂಡಿದ್ದೆ. ಬಹುಶಃ ಕಾಲದೊಂದಿಗೇ ಬಯಕೆಯ ಘರ್ಷಣೆಯಾಗಿರ್ಬೇಕು. ಈಗ ನನಗೆ ಅರ್ಥವಾಗ್ತಿದೆ.... ಕಾಲದ್ದೇ ಮೇಲುಗೈಯಂತ. ಅದೇ ಶಕ್ತಿ ಶಾಲೀಂತ' ಸ್ಪಷ್ಟವಾಗ್ತಿದೆ.....ಯಾಕಂದ್ರೆ...

ಮಲ್ಲಿಕಾ :- ಯಾಕಂದ್ರೆ....

[ಮಗುವಿನ ಅಳು ಕೇಳಿಸುವುದು. ಹೆದರಿದವಳಂತೆ ಮಲ್ಲಿಕಾ ಒಳಗೆ ಹೋಗುವಳು. ತನಗೆ ತಾನು ಉತ್ತರ ಕೊಡುವವನಂತೆ ಗ್ರಂಥವನ್ನು ಆಸನದ ಮೇಲಿಡುವನು.]

ಕಾಳಿ :- ಯಾಕಂದ್ರೆ ಅದು ಯಾವುದಕ್ಕೂ ಕಾಯೊಲ್ಲ.

[ಮಿಂಚು ಗುಡುಗಿನ ಧ್ವನಿ. ಸುತ್ತಲೂ ಒಮ್ಮೆ ನೋಡಿ ಕಿಟಕಿಯ ಬಳಿಗೆ ನಡೆಯುವನು ಮಳೆ ಬೀಳುವುದಕ್ಕೆ ಪ್ರಾರಂಭ. ಕಿಟಕಿಯನ್ನು ಬಿಟ್ಟು ಆಸನದೆಡೆ ಬಂದು ಮತ್ತೊಮ್ಮೆ ಅದನ್ನೆತ್ತಿ ಕೊಳ್ಳುವನಲ್ಲದೆ ಅದನ್ನು ನೋಡಿ ಆಸನದ ಮೇಲಿಡುವನು. ಒಳಗೊಮ್ಮೆ ದೃಷ್ಟಿ ಹಾಯಿಸಿ ಹೊಸ್ತಿಲ ಬಳಿಗೆ ನಡೆಯುವನು. ಕ್ಷಣಕಾಲ ಯೋಚಿಸುತ್ತಿದ್ದು ಮತ್ತೆ ಹೊರಗಿನಿಂದ ಬಾಗಿಲು ಮುಚ್ಚಿಕೊಳ್ಳುವನು. ಗುಡುಗು, ಮಳೆ ಮತ್ತೆ ತೀವ್ರವಾಗುವುದು. ಕೆಲಕ್ಷಣಗಳ ನಂತರ ಮಲ್ಲಿಕಾ ಮಗುವನ್ನು ಅಪ್ಪಿಕೊಂಡು ಒಳಗಿನಿಂದ ಬರುವಳು. ಕಾಳಿದಾಸನನ್ನು ಕಾಣದೆ ಓಡುತ್ತಾ ಕಿಟಕಿಯ ಬಳಿಗೆ ಹೋಗುವಳು]

ಮಲ್ಲಿಕಾ :- ಕಾಳಿದಾಸ!

[ಅಷ್ಟೇ ವೇಗದಿಂದ ಬಾಗಿಲು ತೆಗೆದು] ಕಾಳಿದಾಸ!

[ಹೊರಕ್ಕೆ ಹೋಗಲು ಹೆಜ್ಜೆಯಿಟ್ಟು ಮಗುವನ್ನು ನೋಡಿ ತಡೆದವಳಂತೆ ನಿಂತು ಬಿಡುವಳು. ನಿರಾಶೆಯ ನಿಟ್ಟುಸಿರು ಬಿಟ್ಟು ಒಂದು ಆಸನದ ಮೇಲೆ ಕೂಡುವಳು. ಮಗುವನ್ನು ಇನ್ನೂ ಬಿಗಿಯಾಗಿ ಅಪ್ಪಿಕೊಂಡು ಮುದ್ದಿಡತೊಡಗುತ್ತಾಳೆ. ಆಗಾಗ ಮಿಂಚು, ಗುಡುಗು ಕೇಳುತ್ತಲೇ ಇರುವುದು]

ಸಂಪೂರ್ಣಂ

* * *

ಸ್ವಾತಂತ್ರ್ಯೋತ್ತರ ಭಾರತದಲ್ಲಿ ಹಿಂದಿಯೂ ಸೇರಿದಂತೆ ಎಲ್ಲ ಪ್ರಾಂತೀಯ ಭಾಷಾ ಸಾಹಿತ್ಯ ಕ್ಷೇತ್ರಗಳಲ್ಲಿ ನವೋದಯ, ನವೀನ ಇತ್ಯಾದಿ ಹೆಸರುಗಳಲ್ಲಿ ಹೊಸ ಸಾಹಿತ್ಯ ಚಳುವಳಿ ಪ್ರಾರಂಭವಾಗಿ ಹಿಂದಿನ ಸಾಹಿತ್ಯ ಪರಂಪರೆಗಿಂತ ಭಿನ್ನರೀತಿಯಲ್ಲಿ ಬರೆಯುವ ಪ್ರಕ್ರಿಯೆ ಪ್ರಾರಂಭವಾಯಿತು. ವಸ್ತು, ಅಭಿವ್ಯಕ್ತಿ, ಆಶಯಗಳೆಲ್ಲದರಲ್ಲೂ ಹೊಸ, ದೃಷ್ಟಿಕೋನ ಅನಿವಾರ್ಯವಾಯಿತು. ಹೀಗಾಗಿ ಹಿಂದಿಯಲ್ಲಿ ನವೀನ ಸಾಹಿತ್ಯ ಯುಗ ಸೃಷ್ಟಿಯಾಯಿತು. ಈ ಯುಗದ ಪ್ರಾತಿನಿಧಿಕ ಲೇಖಕರಲ್ಲಿ ಮೋಹನ್ ರಾಕೇಶರೂ ಕೂಡ ಒಬ್ಬರಾಗಿದ್ದರು. ಈ ಪ್ರಕಾರದ ಸಾಹಿತ್ಯದಲ್ಲಿ ಮತ್ತು ನವೀನ ಸಾಹಿತ್ಯ ಆಂದೋಲನದ ಭಾಗವಾಗಿದ್ದವರು ಆಲಂಕಾರಿಕತೆ, ಭಾಷಾ ಕ್ಲಿಷ್ಟತೆ, ಅತ್ಯಂತ ಭಾವುಕ ಕಥಾನಕಗಳನ್ನು ಪುರಾತನ ಮೌಲ್ಯಗಳನ್ನು ಅದರಲ್ಲಿಯೂ ಅವೈಚಾರಿಕವಾದವುಗಳನ್ನು ಬಿಟ್ಟು, ಮಧ್ಯಮವರ್ಗದ ಜನರ ಜೀವನ ಸಂಘರ್ಷಗಳನ್ನು ಮಾನಸಿಕ ತುಮುಲಗಳನ್ನು ಹೊಸ ಪರಿಸರ, ವೈಜ್ಞಾನಿಕ ಬೆಳವಣಿಗೆ, ಸಾಮಾಜಿಕ, ರಾಜಕೀಯ ಸ್ಥಿತ್ಯಂತರ, ಸಾಂಸ್ಕೃತಿಕ ಸಂಘರ್ಷಗಳು, ಬದಲಾಗುತ್ತಿದ್ದ ಜೀವನ ಮೌಲ್ಯಗಳು- ಹೀಗೆ ಹತ್ತು ಹಲವಾರು- ವಿಷಯಗಳನ್ನು ಕುರಿತು ನಡೆಸುವ ಅನುಸಂಧಾನದ ಫಲವಾಗಿ ಸೃಷ್ಟಿಯಾಗುತ್ತಿದ್ದ ಸಾಹಿತ್ಯ ಯಾವುದೇ ಪ್ರಕಾರದ್ದಾಗಲೀ ಮೇಲಿನವುಗಳನ್ನು ತಾತ್ವಿಕ ಚಿಂತನೆಗಳ ಪರಿವೇಶದೊಂದಿಗೆ ಬಿಂಬಿಸುವ ಪ್ರಯತ್ನಕ್ಕೆ ತೊಡಗಿದರು.

(ಲೇಖಕರ ಮಾತಿನಿಂದ)

